CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೧೭, ೨೦೦೪ (ಜೇಷ್ಠ ೨೭, ಶಕ ವರ್ಷ ೧೯೨೬) | ಸಂಚಿಕೆ ೨೫ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ವಿಭಾಗ, ತುಮಕೂರು**

**ಸಂಕ್ಷಿಪ್ತ ಟೆಂಡರು ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)**

**ಸಂಖ್ಯೆ: ಕಾನಿಇಂ:ಲೋಇವಿ:ತು:ಡಿಬಿ-4: ಟೆಂಡರ್-1/2004-05 ದಿನಾಂಕ: 28ನೇ ಮೇ 2004**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿನ ಪಾರದರ್ಶಕತೆಯ ಅಧ್ಯಾದೇಶ 2000 ರಂತೆ ಹಾಗೂ ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ-11 ಪಿಡಬ್ಲ್ಯೂಜಿ-65 ನಿಬಂಧನೆಗೊಳಪಟ್ಟು ಅರ್ಹ ದರ್ಜೆಯ ಲೋಕೋಪಯೋಗಿ ಇಲಾಖೆಯ ನೊಂದಾಯಿತ ಗುತ್ತಿಗೆದಾರರುಗಳಿಂದ ಕಾಮಗಾರಿಗಳಿಗೆ ಮೊಹರು ಮಾಡಲಾದ ಎರಡು ಲಕೋಟೆಯ ಪದ್ಧತಿಯಂತೆ ಕೆಳಕಂಡ ಕಾಮಗಾರಿಗಳಿಗೆ ಮೊಹರು ಮಾಡಲಾದ ಲಕೋಟೆಯ ಮೇಲೆ ಕಾಮಗಾರಿ ಹೆಸರನ್ನು ನಮೂದಿಸಿದ ಟೆಂಡರುಗಳನ್ನು ದ್ವಿಪ್ರತಿಯಲ್ಲಿ ಕರ್ನಾಟಕ ರಾಜ್ಯಪಾಲರ ಪರವಾಗಿ ಆಹ್ವಾನಿಸಲಾಗಿದೆ. ಕಾಮಗಾರಿಗಳಿಗೆ ಟೆಂಡರು ಸಲ್ಲಿಸಲು ಇಚ್ಚೆಯುಳ್ಳವರು ಮನವಿಯನ್ನು ಕಾಮಗಾರಿಯ ಎದುರು ನಮೂದಿಸಿರುವ ಮೊತ್ತದ ಡಿ.ಡಿ.ಯೊಂದಿಗೆ ಕಾರ್ಯಪಾಲಕ ಇಂಜಿನಿಯರ್, ಲೋ:ಇ: ತುಮಕೂರು ವಿಭಾಗ, ತುಮಕೂರು ರವರ ಹೆಸರಿಗೆ ಜಮಾ ಮಾಡಿದಂತೆ ಕೆಳಗೆ ಸಹಿ ಮಾಡಿರುವ ಕಚೇರಿಗೆ ದಿನಾಂಕ: 8.7.2004 ರಂದು ಸಂಜೆ 5.00 ಗಂಟೆಯೊಳಗಾಗಿ ಮನವಿಯೊಂದಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ. ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ದಾಸ್ತಾವೇಜುಗಳು, ಮುದ್ರಿತ ಕರಾರುಗಳು, ರೇಖಾ ಚಿತ್ರಗಳು, ಕಾಮಗಾರಿಗಳ ಪೂರ್ಣ ತಪಶೀಲು ಪರಿಮಾಣ ಇತ್ಯಾದಿಗಳಲ್ಲದೇ ಕರಾರು ಷರತ್ತುಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳಿಗಾಗಿ ದಿನಾಂಕ: 12.7.2004 ರಂದು ಬೆಳಿಗ್ಗೆ 10.00 ರಿಂದ ಸಂಜೆ 5.00 ಗಂಟೆಯೊಳಗಾಗಿ ಪಡೆಯಬಹುದು ಅಗತ್ಯವಿರುವ ಪೂರ್ವ ಅರ್ಹತೆಗಳನ್ನು ಟೆಂಡರ್ ದಾಸ್ತಾವೇಜುವಿನಲ್ಲಿ ಸವಿವರವಾಗಿ ನಮೂದಿಸಲಾಗಿರುತ್ತದೆ.

ಗುತ್ತಿಗೆದಾರರು ಸ್ವಂತ ಅಥವಾ ಹೊಂದಿಸಿಕೊಂಡು ಕೆಲಸ ಮಾಡುವಂತಹ ಹಾಟ್ ಮಿಕ್ಸ್ ಪ್ಲಾಂಟ್ ಒಂದು ಸಂಖ್ಯೆ ಪೇವರ್ ಒಂದು ಸಂಖ್ಯೆ ಸ್ವಂತ ಹೊಂದಿರುವಂತ ಕಾಂಕ್ರೀಟ್ ಮಿಕ್ಸರ್ ಒಂದು ಸಂಖ್ಯೆ ನಾಲ್ಕು ಸಂಖ್ಯೆ ಟಿಪ್ಪರ್‌ಗಳು, ಎರಡು ಸಂಖ್ಯೆ ರೋಡ್ ರೋಲರ್‌ಗಳು ಒಂದು ಸಂಖ್ಯೆ ಮೆಕ್ಯಾನಿಕಲ್ ಸ್ಪ್ರೇಯರ್ ಹಾಗೂ ಇತರೆ ಅಗತ್ಯ ಯಂತ್ರೋಪಕರಣಗಳನ್ನು ಹೊಂದಿದ್ದು ರಸ್ತೆ ಮತ್ತು ಮೋರಿ ನಿರ್ಮಾಣಗಳ ಕೆಲಸದಲ್ಲಿ ಅನುಭವ ಹೊಂದಿರಬೇಕು, ಕಾಮಗಾರಿಗೆ ನಿಗದಿಪಡಿಸಿದ ಮುಂಗಡ ಠೇವಣಿಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್ ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಹೆಸರಿಗೆ ಜಮಾ ಮಾಡಬಹುದಾದಂತೆ ಡಿಮ್ಯಾಂಡ್ ಡ್ರಾಫ್ಟ್: ಎಫ್‌ಡಿಆರ್: ಬ್ಯಾಂಕರ್ಸ್ ಚೆಕ್: ಬ್ಯಾಂಕ್ ಗ್ಯಾರಂಟಿ (ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಂಬಂಧಪಟ್ಟಿರುವವುಗಳು ಮಾತ್ರ), ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರುವ ಹಾಗೂ ಒತ್ತೆ ಇಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಭರ್ತಿ ಮಾಡಿದ ಟೆಂಡರ್‌ನೊಂದಿಗೆ ದಿನಾಂಕ: 16.7.2004 ರಂದು ಸಂಜೆ 4.00 ಗಂಟೆಯೊಳಗಾಗಿ ತುಮಕೂರು ಲೋಕೋಪಯೋಗಿ ಇಲಾಖಾ ವಿಭಾಗ ಕಚೇರಿಯಲ್ಲಾಗಲೀ ಅಥವಾ ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತ, ಅಧೀಕ್ಷಕ ಇಂಜಿನಿಯರ್‌ರವರ ಕಛೇರಿಯಲ್ಲಾಗಲೀ ಸ್ವೀಕರಿಸಲಾಗುವುದು. ನಿಬಂಧನೆಗಳಿಗೊಳಪಟ್ಟು ಅಥವಾ ಮೇಲಿನ ಯಾವುದೇ ಷರತ್ತುಗಳನ್ನು ಪೂರ್ಣಗೊಳಿಸದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಮೇಲೆ ನಿಗದಿಪಡಿಸಿರುವ ಯಾವುದೇ ದಿನಾಂಕಗಳಂದು ಸರ್ಕಾರ ರಜಾ ದಿನಗಳೆಂದು ಘೋಷಿಸಲ್ಪಟ್ಟಲ್ಲಿ ಮುಂದಿನ ಕೆಲಸದ ದಿನಗಳನ್ನು ಪರಿಗಣಿಸಲಾಗುವುದು. ಗುತ್ತಿಗೆದಾರರು ಮನವಿ ಪತ್ರದ ಜೊತೆಯಲ್ಲಿ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ನೋಂದಣಿ ಪತ್ರವನ್ನು ಲಗತ್ತಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್ ಗಿಡುವ ಸರಿಸುಮಾರು ಮೊಬಲಗು (ಲಕ್ಷರೂ. ಗಳಲ್ಲಿ) | ಸಲ್ಲಿಸಬೇಕಾದ ಠೇವಣಿ ಹಣ | ಕಾಮಗಾರಿ ಪೂರ್ಣಗೊಳಿಸ ಬೇಕಾದ ಕಾಲಾವಧಿ ಮಳೆಗಾಲ ಸೇರಿ | ಅರ್ಹ ದರ್ಜೆ ಗುತ್ತಿಗೆ ದಾರರು | ಟೆಂಡರ್ ಫಾರಂ ಬೆಲೆ+ತೆರಿಗೆ (ಫಾರಂ ಬೆಲೆ ಹಿಂದಿರುಗಿಸ ಲಾಗುವುದಿಲ್ಲ) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | **ಐಟಂವಾರು ಟೆಂಡರು** | | | | | | |
| 1. | ಸಿರಾ ತಾ: ಎನ್.ಎಸ್. ರಸ್ತೆಯಿಂದ ಕುಂಟರಾಮನಹಳ್ಳಿ ವರೆಗೆ ಬೆಂಚಿ, ಹಳೇ ಬಿಜ್ಜನಬೆಳ್ಳ, ಮಾಲೇನಹಳ್ಳಿ ಮಾರ್ಗವಾಗಿ ರಸ್ತೆ ಅಭಿವೃದ್ಧಿ. | 120.00 | 120.00 | 120000 | 9 ತಿಂಗಳು | 1ನೇ ದರ್ಜೆ | 12000+ತೆರಿಗೆಗಳು |
| 2. | ತುರುವೇಕೆರೆ ತಾ: ಎಸ್.ಬಿ. ರಸ್ತೆಯಿಂದ ಪಿ. ಕಲ್ಲಹಳ್ಳಿವರೆಗೆ ಮಾವಿನಹಳ್ಳಿ, ಕೊಳ್ಳಾಗಟ್ಟ ಮಾರ್ಗವಾಗಿ ರಸ್ತೆ ಅಭಿವೃದ್ಧಿ | 78.00 | 78.00 | 78000 | 9 ತಿಂಗಳು | 1ನೇ ದರ್ಜೆ | 8000+ತೆರಿಗೆಗಳು |

**ಟೆಂಡರು ದಾಸ್ತಾವೇಜು ಸಲ್ಲಿಕೆಗೆ ನಿಗದಿಪಡಿಸಿರುವ ದಿನಾಂಕಗಳು**

1. ಖಾಲಿ ಟೆಂಡರ್ ಫಾರಂಗೆ ಮನವಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 8.7.2004ರ ಸಂಜೆ 5.00 ಗಂಟೆವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ಕೊನೆಯ ದಿನಾಂಕ: 12.7.2004ರ ಸಂಜೆ 5.00 ಗಂಟೆಯವರೆಗೆ
3. ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಕಛೇರಿಗೆ ಸಲ್ಲಿಸಲು ಕೊನೆಯ ದಿನಾಂಕ: 16.7.2004 ರ ಸಂಜೆ 4.00 ಗಂಟೆಯವರೆಗೆ
4. ತಾಂತ್ರಿಕ ಬಿಡ್‌ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಕಚೇರಿಯಲ್ಲಿ ತೆರೆಯುವ ದಿನಾಂಕ: 16.7.2004ರ ಸಂಜೆ 5.00 ಗಂಟೆಗೆ ಅಥವಾ ಮುಂದಿನ ಸೂಕ್ತವಾದ ದಿನಾಂಕದಂದು ತೆರೆಯಲಾಗುವುದು.

**"ವಿಶೇಷ ಸೂಚನೆಗಳು"**

1. ಯಾವ ಕಾರಣವನ್ನೂ ಸಹಾ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಮೇಲೆ ನಮೂದಿಸಿರುವ ಷರತ್ತುಗಳಿಗನುಗುಣವಾಗಿ ಮುಂಗಡ ಠೇವಣಿ ಸಲ್ಲಿಸದೇ ಇರುವ ಟೆಂಡರ್‌ಗಳನ್ನು ನೇರವಾಗಿ ತಿರಸ್ಕರಿಸಲಾಗುವುದು.
3. ಖಾಲಿ ಟೆಂಡರ್ ಫಾರಂಗಳಿಗಾಗಿ ಮನವಿಯನ್ನು ಸಲ್ಲಿಸುವಾಗ ಅರ್ಹ ದರ್ಜೆಯಲ್ಲಿ ನೊಂದಾಯಿತರಾಗಿರುವ ಬಗ್ಗೆ ಪ್ರಮಾಣ ಪತ್ರ ಮತ್ತು ಗುತ್ತಿಗೆದಾರರ ದಾಖಲಾತಿ ಪುಸ್ತಕ (ಪಾಸ್ ಬುಕ್)ಗಳನ್ನು ಸಲ್ಲಿಸಿ ದಾಖಲಾತಿ ಮಾಡಿಸಿಕೊಳ್ಳಬೇಕು.
4. ಅರ್ಜಿ ಸಲ್ಲಿಸುವಾಗ ಅವರು ನಿರ್ವಹಿಸುತ್ತಿರುವ ಕಾಮಗಾರಿಗಳ ಪಟ್ಟಿಗಳನ್ನು ಮತ್ತು ಪೂರ್ಣಗೊಳಿಸಿದ ಕಾಮಗಾರಿಗಳ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ನೇರವಾಗಿ ತಿರಸ್ಕರಿಸಲಾಗುವುದು.
5. ಗುತ್ತಿಗೆದಾರರೇ ಸ್ವತಃ ಸಿಮೆಂಟ್, ಉಕ್ಕು, ಡಾಂಬರ್ ಮತ್ತು ಕಾಮಗಾರಿಗಳನ್ನು ಕೈಗೊಳ್ಳಲು ಇತರೆ ಅವಶ್ಯಕ ಸಾಮಗ್ರಿಗಳನ್ನು ಒದಗಿಸಿಕೊಂಡು ಇಲಾಖಾ ನಿಯಮಾವಳಿಗಳ ಪ್ರಕಾರ ಕೆಲಸವನ್ನು ಪೂರ್ಣಗೊಳಿಸಬೇಕು ಮತ್ತು ಗುತ್ತಿಗೆದಾರರು ಸಾಮಗ್ರಿಗಳನ್ನು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
6. ಟೆಂಡರ್ ಫಾರಂಗಳನ್ನು ಪಡೆಯುವ ಸಂದರ್ಭದಲ್ಲಿ ಮತ್ತು ಟೆಂಡರ್ ಸಲ್ಲಿಸುವ ಸಮಯದಲ್ಲಿ ಪಾಸ್ ಬುಕ್‌ನಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು.
7. ಮೇಲಿನ ಕಾಮಗಾರಿಗೆ ಅರ್ಜಿಸಲ್ಲಿಸುವ ಗುತ್ತಿಗೆದಾರರು, ಅದೇ ರೀತಿಯ ಕಾಮಗಾರಿಯನ್ನು (ಎ) ಕಾಮಗಾರಿಗೆ ನಿಗದಿಪಡಿಸಿದ ಮೊತ್ತದಲ್ಲಿ ಶೇಕಡ 30ರಷ್ಟು ಮೊತ್ತಕ್ಕೆ ಹಿಂದಿನ ಐದು ಆರ್ಥಿಕ ವರ್ಷಗಳಲ್ಲಿನ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಕೆಲಸ ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು ಅಥವಾ (ಬಿ) ಹಿಂದಿನ ಐದು ಆರ್ಥಿಕ ವರ್ಷಗಳ ಕಾಲಾವಧಿಯಲ್ಲಿ ವರ್ಷಕ್ಕೆ ಕನಿಷ್ಠ ಶೇಕಡ 10 ರಂತೆ ಒಟ್ಟು ಗೂಡಿಸಿದಂತೆ ಸದರಿ ಕಾಮಗಾರಿಗೆ ನಿಗದಿಪಡಿಸಿರುವ ಮೊತ್ತದ ಶೇಕಡ 30 ರಷ್ಟು ಮೊತ್ತದ ಕೆಲಸವನ್ನು ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಗಳ ದೃಢೀಕರಣ ಪತ್ರವನ್ನು ಅರ್ಜಿ ಸಲ್ಲಿಸುವ ಸಂದರ್ಭದಲ್ಲೇ ಒದಗಿಸಬೇಕು.
8. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು. ಇಂತಹ ಗುತ್ತಿಗೆದಾರರ ಅರ್ಜಿಗಳನ್ನು ನೇರವಾಗಿ ತಿರಸ್ಕರಿಸಲಾಗುವುದು. ಒಂದು ವೇಳೆ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದರೂ ಕಾಮಗಾರಿ ಪೂರ್ಣಗೊಳಿಸದಿದ್ದಲ್ಲಿ, ಕುಂಠಿತವಾಗಿದ್ದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಮೇಲಿನ ಕೆಲಸಗಳಿಗೆ ಬೇಕಾದ ಅಗತ್ಯವಾಗಿ ಬೇಕಾಗಿರುವ ಯಂತ್ರೋಪಕರಣಗಳ ಪೈಕಿ ಸ್ವಂತ ಹೊಂದಿರುವ ಅಥವಾ ಹೊಂದಿಸಿಕೊಂಡು ಕೆಲಸ ನಿರ್ವಹಿಸುವಂತಹ ಯಂತ್ರೋಪಕರಣಗಳು 1 ಹೆಚ್‌ಎಂಪಿ ಒಂದು ಸಂಖ್ಯೆ (40:60) ಟಿಪಿಹೆಚ್ ಅಥವಾ ಹೆಚ್ಚಿನ ಸಾಮರ್ಥ್ಯವುಳ್ಳ ಎಂಟಿಆರ್‌ಟಿ ಮತ್ತು ಹೆಚ್ ವಿಶಿಷ್ಟ ವಿವರಣೆ ಅನುಗುಣವಾಗಿರಬೇಕು 2. ಮೆಕ್ಯಾನಿಕಲ್

ಪೇವರ್ ಫಿನಿಶರ್ ಒಂದು ಸಂಖ್ಯೆ ಸ್ವಂತ ಹೊಂದಿರುವ ಯಂತ್ರೋಪಕರಣಗಳು 1. ಸ್ಟ್ಯಾಟಿಕ್: ಪವರ್ ರೋಡ್ ರೋಲರ್ ಎರಡು ಸಂಖ್ಯೆ, 2. ಟಿಪ್ಪರ್ ನಾಲ್ಕು ಸಂಖ್ಯೆ, 3. ಮೆಕ್ಯಾನಿಕಲ್ ಸ್ಪ್ರೇಯರ್ ಒಂದು ಸಂಖ್ಯೆ, 4. ಕಾಂಕ್ರೀಟ್ ಮಿಕ್ಸರ್ ಒಂದು ಸಂಖ್ಯೆ ಹಾಗೂ ಏರ್ ಕಂಪ್ರೆಸರ್ ಒಂದು ಸಂಖ್ಯೆ, ಇತರೆ ಅವಶ್ಯಕ ಯಂತ್ರೋಪಕರಣಗಳು ಈ ಯಂತ್ರೋಪಕರಣಗಳು ಚಾಲ್ತಿಯಲ್ಲಿರುವ ಬಗ್ಗೆ ದಾಖಲಾತಿಗಳನ್ನು ಸಕ್ಷಮ ಪ್ರಾಧಿಕಾರದಿಂದ ದೃಢೀಕರಿಸಿ ಅರ್ಜಿ ಸಲ್ಲಿಸುವ ಸಮಯದಲ್ಲೇ ಒದಗಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

10. ಟೆಂಡರ್ ಸಲ್ಲಿಸುವ ಗುತ್ತಿಗೆದಾರರು ತಾಂತ್ರಿಕ ಬಿಡ್‌ನಲ್ಲಿನ ಎಲ್ಲಾ ವಿವರಗಳನ್ನು ಭರ್ತಿ ಮಾಡಿ ಇ.ಎಂ.ಡಿ, ಯಂತ್ರೋಪಕರಣ ಮತ್ತು ಅಗತ್ಯ ದಾಖಲಾತಿಗಳೊಂದಿಗೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ, ಆರ್ಥಿಕ ಬಿಡ್‌ನಲ್ಲಿನ ಷೆಡ್ಯೂಲ್ ಬಿ ನಲ್ಲಿ ದರಗಳನ್ನು ಅಳವಡಿಸಿ ಆರ್ಥಿಕ ಬಿಡ್ ಎಂದು ನಮೂದಿಸಿ ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ, ಎರಡೂ ಲಕೋಟೆಗಳ ಮೇಲೆ ಕಾಮಗಾರಿಯ ಹೆಸರನ್ನು ಸ್ಪಷ್ಟವಾಗಿ ನಮೂದಿಸಿ ಈ ಎರಡೂ ಲಕೋಟೆಗಳನ್ನು ಮೂಲ ಲಕೋಟೆಯಲ್ಲಿ ಹಾಕಿ ಮೊಹರು ಮಾಡಿ ಕಾಮಗಾರಿಯ ಹೆಸರನ್ನು ನಮೂದಿಸಿ ಸಲ್ಲಿಸತಕ್ಕದ್ದು.

11. ಗುತ್ತಿಗೆದಾರರು ಮೂರು ವರ್ಷದವರೆವಿಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.

12. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ ಲಕೋಟೆ ಮೇಲೆ ಮತ್ತು 'ಬಿ' ಷೆಡ್ಯೂಲ್‌ನಲ್ಲಿ ತಮ್ಮ ಪೂರ್ಣ ವಿಳಾಸವನ್ನು ನಮೂದಿಸಬೇಕು. ಇಲ್ಲವಾದಲ್ಲಿ ನೇರವಾಗಿ ತಿರಸ್ಕರಿಸಲಾಗುವುದು.

13. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ 'ಬಿ' ಷೆಡ್ಯೂಲ್‌ನಲ್ಲಿ ದರಗಳನ್ನು ನಮೂದಿಸುವಾಗ ಸ್ಪಷ್ಟವಾಗಿ ಒಂದೇ ರೀತಿಯ ಬರವಣಿಗೆಯಲ್ಲಿ ಪ್ರತೀ ಪುಟಕ್ಕೂ ಸಹಿಯೊಂದಿಗೆ ಯಾವುದೇ ರೀತಿಯ ವ್ಯತ್ಯಾಸವಾಗದಂತೆ ನಮೂದಿಸಬೇಕು. ಇಲ್ಲವಾದಲ್ಲಿ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

14. ಟೆಂಡರ್‌ದಾರರು ಜಂಟಿಯಾಗಿ (ಇನ್ನೋರ್ವ ಗುತ್ತಿಗೆದಾರರೊಂದಿಗೆ) ಭಾಗವಹಿಸಲು ಅವಕಾಶವಿಲ್ಲ.

ಪಿ.ಆರ್.251 ಕಾರ್ಯನಿರ್ವಾಹಕ ಇಂಜಿನಿಯರ್, ಲೋ.ಇ. ವಿಭಾಗ, ತುಮಕೂರು.

**HIGH COURT OF KARNATAKA, BANGALORE**
**NOTIFICATION**
**No: HCA-II2/2004 Dated: 15th March 2004**

**Sub :** Sealed tenders for purchase of time Barred Judicial Records of the High Court Office.

It is hereby notified for the information of general public that sealed tenders will be received by the undersigned for the sale of time barred judicial records, out-dated forms and other waste papers of this office. The persons who are interested may therefore submit their sealed tenders within 7 (Seven) days from the date of Notification, furnishing their highest rate per quintal, offered for the purchase of time barred judicial records, etc. for consideration.

The sale of the Time barred judicial records is subject to the following conditions:

1. An Earnest Money Deposit (EMD) of Rs. 10,000/- should be made in the Accounts Branch-1 of the High Court Office and the receipt obtained thereof should be enclosed to the quotation by the person who is interested in purchase of time barred judicial records, otherwise their tender will not be considered.
2. The EMD will be refunded forthwith to those persons whose quotations are not accepted.
3. The auction purchaser shall pay the Sales Tax as per the Sales Tax Act & Rules made thereunder.
4. The tender shall be opened by the undersigned next day before the persons who have submitted their tenders or any representative duly authorised. The persons whose tenders are accepted shall make the full payment of the cost of the entire lot of time barred judicial records, immediately after the records are put to weight and informed to him of the weight arrived at. The delivery of the records should be taken on that day, after payment.
5. In case of his failure to take delivery of the records after weighment and his failure to pay the full value thereof, the EMD shall be forfeited to the Government and he shall also be liable to make good loss, if any, incurred due to re-tender.
6. The undersigned reserves the right to accept or reject the tenders without assigning any reason thereof.
7. The weighment shall be made in the premises of High Court.

**R. B. BUDIHAL**
Registrar (Judicial).

PR-245

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ**

**ಸಂಖ್ಯೆ: ಎ4:ಎಂಎಫ್‌ಪಿ:ಸಿಆರ್:78:2003-04**

**ವಿಷಯ :** 2004-06ನೇ ಸಾಲಿಗೆ ಶಿವಮೊಗ್ಗ ಅರಣ್ಯ ವಿಭಾಗದ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಟೆಂಡರ್-ಕಂ-ಹರಾಜು.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ, ಶಿವಮೊಗ್ಗ ಅರಣ್ಯ ವಿಭಾಗಕ್ಕೆ ಸೇರಿದ ಸರ್ಕಾರಿ ಅರಣ್ಯಗಳು, ಕಾದಿಟ್ಟ ಅರಣ್ಯಗಳು, ಕಿರು ಅರಣ್ಯಗಳು, ಅನುಭೋಗದಲ್ಲಿರುವ ಸರ್ಕಾರಿ ಜಮೀನು ಹಾಗೂ ಇತರೆ ಅರಣ್ಯ ಪ್ರದೇಶದಲ್ಲಿರುವ

ನೆಡುತೋಪುಗಳಲ್ಲಿ (ವನ್ಯಜೀವಿ ಮತ್ತು ಜಂಟಿ ಅರಣ್ಯ ಯೋಜನೆಗಳ ಪ್ರದೇಶಗಳನ್ನು ಹೊರತುಪಡಿಸಿ) ಲಭ್ಯವಿರುವ ಈ ಕೆಳಕಂಡ ಕಿರು ಅರಣ್ಯ ಉತ್ಪನ್ನಗಳ ಬಾಬನ್ನು 2004-06ನೇ ಸಾಲಿಗೆ ಕರಾರು ಒಪ್ಪಂದದ ದಿನಾಂಕದಿಂದ 30.06.2006 ರವರೆಗೆ ಸಂಗ್ರಹಿಸಿ ಸಾಗಾಣಿಕೆ ಮಾಡುವ ಹಕ್ಕನ್ನು ಟೆಂಡರು-ಕಂ-ಹರಾಜು ಮೂಲಕ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಕಛೇರಿಯಲ್ಲಿ ಈ ಕೆಳಕಂಡ ವೇಳೆಯಲ್ಲಿ ವಿಲೇವಾರಿ ಮಾಡಲಾಗುವುದು.

1. ಟೆಂಡರು ಸ್ವೀಕಾರದ ದಿನಾಂಕ: 26.06.2004 ರಂದು ಮಧ್ಯಾಹ್ನ 4-00 ಘಂಟೆಯವರೆಗೆ.
2. ಹರಾಜು ದಿನಾಂಕ: 26.06.2004 ರಂದು ಮಧ್ಯಾಹ್ನ 4-30 ಘಂಟೆಗೆ.

**ಷೆಡ್ಯೂಲ್**

1. ತೂಪ್ರಾ ಎಲೆ (2) ಹಾಲು ಮಡ್ಡಿ (3) ನೀಲಗಿರಿ ಸಿಟ್ರಿಯೋಡೋರಾ ಎಲೆ.

ಪಾವತಿಸಬೇಕಾಗಿರುವ ಇ.ಎಂ.ಡಿ. ಕ್ರಮ ಸಂಖ್ಯೆ: (1) ಹಾಗೂ (2)ಕ್ಕೆ 2000-00 ರೂ.ಗಳ ಹಾಗೂ ಕ್ರಮ ಸಂಖ್ಯೆ: (3)ಕ್ಕೆ 3000-00 ರೂ.ಗಳು ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

**ಜಿ. ಜಯರಾಮಯ್ಯ**

ಪಿ.ಆರ್.252 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ನಮೂನೆ-1**

**9ನೇ ನಿಯಮ ನೋಡಿ**

**ಉಪ ನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ**

ಸರ್ಕಾರಿ ಹಿರಿಯ ಪ್ರೌಢಶಾಲೆ ಸುಗನಹಳ್ಳಿ ಶಿರಹಟ್ಟಿ ತಾಲ್ಲೂಕು ಗದಗ ಇಲ್ಲಿ ಸಹಾಯಕ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ **ಶ್ರೀ ಬಸವಣ್ಣೆಪ್ಪ ಪ್ರಭಪ್ಪ ಕ್ಷೌರದ** ಇವರ ಹೆಸರನ್ನು **ಬಸವಣ್ಣೆಪ್ಪ ಪ್ರಭಪ್ಪ ಮುಳಗುಂದ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿಡಿ.111 ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು-03**

**ಟೆಂಡರ್ ಮತ್ತು ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ: ಎ5:ವಾಹನ:ವಿಲೆ:ಜಿಎಲ್/04-05 ದಿನಾಂಕ: 1ನೇ ಜೂನ್ 2004**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ, ಬಹುಮಹಡಿ ಕಟ್ಟಡ ಇವರಿಂದ ಹಸ್ತಾಂತರಿಸಿದ ವಾಹನ ಸಂಖ್ಯೆ: ಸಿಕೆಜಿ-194, ಸಿಕೆಜಿ-195 ಮತ್ತು ಇಲಾಖೆಯಲ್ಲಿರುವ ಕಾರು ಕೆಎ-01-ಜಿ-2991 ದಿನಾಂಕ: 28.06.2004 ರಂದು ಅಪರಾಹ್ನ 3.00 ಗಂಟೆಗೆ ಸರಿಯಾಗಿ ಜಾರಕಬಂಡೆ ಕಾವಲ್, ಉಗ್ರಾಣದಲ್ಲಿ ವಾಹನ ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿಯೇ ಹಾಗೂ ಕೆ.ಆರ್.ಪುರಂ. ವಲಯದ ಕಛೇರಿಯ ಎದುರಿನಲ್ಲಿರುವ ನಿರುಪಯುಕ್ತ ಲಾರಿ ಕೆಎ-01-ಜಿ-8342ನ್ನು ದಿನಾಂಕ: 29.06.2004 ರಂದು ಅಪರಾಹ್ನ 3.00 ಗಂಟೆಗೆ ಸರಿಯಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಟೆಂಡರ್ ಕಂ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಟೆಂಡರ್ ಕಂ ಹರಾಜಿನಲ್ಲಿ ಪಾಲ್ಗೊಳ್ಳಬಹುದು. 28.06.2004 ಮತ್ತು 29.06.2004 ರಂದು ಹರಾಜು ನಡೆಯದಿದ್ದಲ್ಲಿ ಕ್ರಮವಾಗಿ 05.07.2004 ಮತ್ತು 06.07.2004 ರಂದು ಅದೇ ಸ್ಥಳದಲ್ಲಿ ನಡೆಸಲಾಗುವುದು.

| ಕ್ರ.ಸಂ. | ವಾಹನಗಳ ವಿವರ | ಇಂಜಿನ್ ಮತ್ತು ಚಾಸಿ ಸಂಖ್ಯೆ | ಹರಾಜಿನ ದಿನಾಂಕ |
|---|---|---|---|
| 1 | ಅಂಬಾಸಿಡರ್ ಕಾರ್ ಸಿಕೆಜಿ-194 | EH-012945 111-517898 Model-1986 Make HLA Petrol | 28.06.2004 |
| 2 | ಅಂಬಾಸಿಡರ್ ಕಾರ್ ಸಿಕೆಜಿ-195 | GEHO-13746 Chasis No-11519251 Model-1986 Petrol | 28.06.2004 |
| 3 | ಅಂಬಾಸಿಡರ್ ಕಾರ್ ಕೆಎ-01-ಜಿ-2991 | ಇಂಜಿನ್ ನಂ. 33669 Chasis No 111-198777 Diesel | 28.06.2004 |
| 4 | ಲಾರಿ-ಕೆಎ-01-ಜಿ-8342 | Engine No. 692002-5712788 Chasis No-3440525712641 Model-1975 HC-CD-Diesel | 29.06.2004 |

**ನಿಯಮಗಳು:**

1. ಟೆಂಡರ್ ಭಾಗವಹಿಸುವ ಪ್ರತಿಯೊಬ್ಬ ಅರ್ಜಿದಾರರು ನಿಗದಿತ ನಮೂನೆಯ ಟೆಂಡರ್ ಫಾರಂಗಳನ್ನು ರೂ. 12.00 ಪಾವತಿಸಿ ಪಡೆಯುವುದು. ಪ್ರತಿ ಟೆಂಡರ್‌ಗೆ ರೂ. 3000 ಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ (ಹೆಸರಿಗೆ) ಪದನಾಮಕ್ಕೆ ಡಿ.ಡಿ. ತೆಗೆದು ಟೆಂಡರ್ ಜೊತೆಯಲ್ಲಿ ಲಗತ್ತಿಸಿ ಅಥವಾ ಹರಾಜಿಗೆ ಹಾಜರಾಗುವ ಮುನ್ನ ರೂ. 3000 ಗಳನ್ನು ಇ.ಎಂ.ಡಿ. ಮೂಲಕ ಕಟ್ಟಿ ಭಾಗವಹಿಸುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿವುಳ್ಳವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನ ಇರುವ ಸ್ಥಳದಲ್ಲಿ ವಾಹನವನ್ನು ಪರೀಕ್ಷಿಸಿ ಸ್ಥಿತಿಗತಿಯನ್ನು ತಪಾಸಣೆ ಮಾಡಿಕೊಂಡು ಖಾತ್ರಿ ಮಾಡಿಕೊಳ್ಳತಕ್ಕದ್ದು. ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
3. ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ $^1/_2$ ಭಾಗ (ಠೇವಣಿ ಹಣವು ಸೇರಿದಂತೆ) ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ (ಎಫ್‌ಡಿಟಿ ಶೇ. 8% ಮತ್ತು ಎಸ್‌ಟಿ 15%) ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಮೂಲ ಬಿಡ್ಡುದಾರರ ಸ್ವಂತ ಖರ್ಚು ಮತ್ತು ಜವಾಬ್ದಾರಿಯ ಮೇರೆಗೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟ ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ತಪ್ಪಿದಲ್ಲಿ ಈ ನಷ್ಟವನ್ನು ಮೂಲ ಬಿಡ್ಡುದಾರರಿಂದ ಅರಣ್ಯ ಕಾಯ್ದೆ 1969 ಅಧಿನಿಯಮ 109ರ ಪ್ರಕಾರ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

4. ಸಂಬಂಧಪಟ್ಟ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾದ ನಂತರ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ/ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ ದಿನದಿಂದ 60 ದಿನಗಳ ಒಳಗಾಗಿ ಯಶಸ್ವಿ ಬಿಡ್ಡುದಾರರಿಗೆ/ ಟೆಂಡರ್‌ದಾರರಿಗೆ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರರು ಟೆಂಡರ್‌ದಾರರು ಉಳಿದ ಮುಕ್ಕಾಲು ಭಾಗ ಹರಾಜಿನ ಮೊತ್ತದ ಹಣವನ್ನು ಸ್ವೀಕೃತಿ ಅರ್ಜಿಯ ಪ್ರತಿ ತಲುಪಿದ 15 ದಿನಗಳ ಒಳಗೇ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದಲ್ಲಿ ನಿಬಂಧನೆಯ ಸಂಖ್ಯೆ 3ರ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.
6. ಯಶಸ್ವಿನ ಬಿಡ್ಡುದಾರರಿಗೆ ತೀವ್ರ ಕಷ್ಟದ ಪರಿಸ್ಥಿತಿಯಲ್ಲಿ ವಾಹನದ ಬಾಕಿ ಮೊತ್ತ ಪಾವತಿಸಲು ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಬಾಕಿ ಮೊತ್ತ ಅದರ ಮೇಲಿನ ಬಡ್ಡಿ ಹಾಗೂ ನೆಲಬಾಡಿಗೆಯನ್ನು ವಿಧಿಸಿ, ಅವಧಿ ವಿಸ್ತರಣೆ ನೀಡಲು ಅಧಿಕಾರವುಳ್ಳರಾಗಿರುತ್ತಾರೆ.
7. ಸದರಿ ವಾಹನದ ಮೇಲೆ ಬೇರೆ ಯಾವುದೇ ಹಣ ಬಾಕಿ ಇದ್ದಲ್ಲಿ ಸದರಿ ಬಾಕಿ ತೀರುವಳಿ ಜವಾಬ್ದಾರಿ ಬಿಡ್ಡುದಾರರಾಗಿರುತ್ತಾರೆ.
8. ಟೆಂಡರ್ ಫಾರಂಗಳನ್ನು ಈ ಕಛೇರಿಯ ವೇಳೆಯಲ್ಲಿ ನಿಗದಿತ ಶುಲ್ಕ ಹತ್ತು ರೂ. ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಕಟ್ಟಿ ದಿನಾಂಕ: 25.06.2004 ರಿಂದ 27.06.2004 ರವರೆಗೆ ಮಧ್ಯಾಹ್ನ 12.00 ಗಂಟೆಯವರೆಗೆ ಪಡೆಯಬಹುದು.
9. ಟೆಂಡರ್‌ಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ಮೊಹರು ಮಾಡಿದ ಕವರಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ದಿನಾಂಕ: 27.06.2004 ಮಧ್ಯಾಹ್ನ 2.00 ಗಂಟೆಗೆ ಹಾಕುವುದು.
10. ಒಬ್ಬರು ಒಂದು ಟೆಂಡರ್‌ನ್ನು ಮಾತ್ರ ಹಾಕಬಹುದು ಒಂದಕ್ಕಿಂತ ಹೆಚ್ಚು ಟೆಂಡರ್ ಹಾಕಿದಲ್ಲಿ ಹೆಚ್ಚು ಮೊತ್ತವನ್ನು ಒಳಗೊಂಡಿರುವ ಟೆಂಡರ್‌ನ್ನು ಮಾತ್ರ ಪರಿಗಣಿಸಿ ಮಿಕ್ಕ ಟೆಂಡರ್‌ಗಳನ್ನು ತಿರಸ್ಕೃತಗೊಳಿಸಲಾಗುವುದು.
11. ಟೆಂಡರ್ ಕವರಿನ ಮೇಲೆ ಕಾರಿನ ಸಂಖ್ಯೆ ನಮೂದಿಸುವುದು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ನಗರ ವಿಭಾಗ, ಬೆಂಗಳೂರು ರವರ ಹೆಸರಿಗೆ ಟೆಂಡರ್ ಅರ್ಜಿಗಳನ್ನು ಸಲ್ಲಿಸಬೇಕು.
12. ಹರಾಜು ದಿನಾಂಕ: 28.06.2004 ರಂದು ಮಧ್ಯಾಹ್ನ 3.00 ಗಂಟೆಗೆ ಸರಿಯಾಗಿ ವಾಹನಗಳನ್ನು ದಾಸ್ತಾನು ಮಾಡಿರುವ ಸ್ಥಳ ಜಾರಕಬಂಡೆ ಕಾವಲ್, (ಶ್ರೀಗಂಧದ ಉಗ್ರಾಣದ ಮುಂಭಾಗ) ಕಮ್ಮಗೊಂಡನಹಳ್ಳಿ ಪಶ್ಚಿಮ, ಜಾಲಹಳ್ಳಿ, ಬೆಂಗಳೂರು ಇಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು. ಮತ್ತು ದಿನಾಂಕ: 29.06.2004 ರಂದು ಮಧ್ಯಾಹ್ನ 3.00 ಗಂಟೆಗೆ ಸರಿಯಾಗಿ ವಾಹನಗಳನ್ನು ದಾಸ್ತಾನು ಮಾಡಿರುವ ಸ್ಥಳ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ವಲಯ ಇವರ ಕಛೇರಿಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
13. ಈ ಮೇಲಿನ ದಿನಂಕದಂದು ಅನಿವಾರ್ಯ ಕಾರಣಗಳಿಂದ ಹರಾಜು ನಿಂತಲ್ಲಿ ದಿನಾಂಕ: 05.07.2004 ರಂದು ಮಧ್ಯಾಹ್ನ 3.00 ಗಂಟೆಗೆ ಸರಿಯಾಗಿ ಜಾರಕಬಂಡೆ ಕಾವಲ್, (ಶ್ರೀಗಂಧದ ಉಗ್ರಾಣದ ಮುಂಭಾಗ) ಕಮ್ಮಗೊಂಡನಹಳ್ಳಿ ಪಶ್ಚಿಮ, ಜಾಲಹಳ್ಳಿ, ಬೆಂಗಳೂರು ಇಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು. ಮತ್ತು ದಿನಾಂಕ: 06.07.2004 ರಂದು ಮಧ್ಯಾಹ್ನ 3.00 ಗಂಟೆಗೆ ಸರಿಯಾಗಿ ವಾಹನಗಳನ್ನು ದಾಸ್ತಾನು ಮಾಡಿರುವ ಸ್ಥಳ ವಲಯ ಅರಣ್ಯಾಧಿಕಾರಿ, ಕೆ.ಆರ್.ಪುರಂ ವಲಯ ಇವರ ಕಛೇರಿಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
14. ಟೆಂಡರ್‌ಗಳನ್ನು ಹರಾಜಿನ ನಂತರ ಹಾಜರಿರುವ ಟೆಂಡರ್‌ದಾರರು, ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
15. ಹರಾಜು ನಡೆಯುವ ದಿನ ಅಥವಾ ಟೆಂಡರ್ ಫಾರಂ ಪಡೆಯಲು ನಿಗದಿಪಡಿಸಿರುವ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜನ್ನು ಮತ್ತು ಟೆಂಡರ್ ಪಡೆಯುವ ದಿನವನ್ನು ಮುಂದಿನ ಕಛೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.
16. ಟೆಂಡರ್‌ದಾರರು ಒಂದು ವಾಹನಕ್ಕೆ ಒಂದು ಟೆಂಡರ್ ಫಾರಂ ಮಾತ್ರ ಉಪಯೋಗಿಸತಕ್ಕದ್ದು.
17. ವಾಹನದ ಮಾಲೀಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.

ಪಿ.ಆರ್.254 ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು.

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

## ಅಧಿಸೂಚನೆ ಸಂಖ್ಯೆ: ಪಿಎಂಟಿ:19:02-03 ದಿನಾಂಕ: 4ನೇ ಜೂನ್ 2004

**ವಿಷಯ :** ಪೊಲೀಸ್ ವಾಹನಗಳ ಅನುಪಯುಕ್ತ ವಸ್ತುಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** ಐಜಿಪಿ ದಕ್ಷಿಣ ವಲಯ ಮೈಸೂರು ರವರ ಪತ್ರ ಸಂ. ಲೆಕ್ಕ (3): ಪಿಎಂಜಿ:230:03-04 ದಿನಾಂಕ: 31.3.2004.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಹಾಸನ ಜಿಲ್ಲಾ ಪೊಲೀಸ್ ವಾಹನಗಳ ಯಥಾ ಸ್ಥಿತಿಯಲ್ಲಿರುವ ಅನುಪಯುಕ್ತ ವಸ್ತುಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಹೊಸಲೈನ್ ರೋಡ್ ಹಾಸನದಲ್ಲಿ ದಿನಾಂಕ: 27.5.2004 ರಂದು ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದ್ದಿತು. ಆದರೆ ಚುನಾವಣಾ ತುರ್ತು ಕರ್ತವ್ಯಗಳಿಂದಾಗಿ ಕಾಲಾವಕಾಶ ಇಲ್ಲದ ಕಾರಣ ಮುಂದೂಡಿ, ದಿನಾಂಕ: 5.8.2004 ರಂದು ಬೆಳಿಗ್ಗೆ 11.00 ಗಂಟೆಗೆ ಅದೇ ಸ್ಥಳದಲ್ಲಿ ಹರಾಜು ಮಾಡಲಾಗುವುದು, ಕಛೇರಿ ವೇಳೆಯಲ್ಲಿ ಅನುಪಯುಕ್ತ ವಸ್ತುಗಳನ್ನು ಹಾಸನ ಡಿಎಆರ್ ಕಛೇರಿಯಲ್ಲಿ ನೋಡಬಹುದಾಗಿದೆ, ಆಸಕ್ತರು ಸದರಿ ವಸ್ತುಗಳನ್ನು ಖರೀದಿಸಬಹುದಾಗಿದೆ.

| ಕ್ರಮ ಸಂಖ್ಯೆ | ನಿರುಪಯುಕ್ತ ವಸ್ತುಗಳು | 1999-2000 | 2000-01 | 2001-02 | 2002-03 | ಒಟ್ಟು ಸಂಖ್ಯೆ: |
|---|---|---|---|---|---|---|
| 1. | ಹಳೆಯ ಟೈರುಗಳು | 88 | 82 | 45 | 59 | 274 |
| 2. | ಹಳೆಯ ಟ್ಯೂಬುಗಳು | 88 | 82 | 45 | 59 | 274 |
| 3. | ಹಳೆಯ ಫ್ಲಾಪ್‌ಗಳು | 7 | - | - | - | 7 |
| 4. | ಹಳೆಯ ಬ್ಯಾಟರಿಗಳು | - | - | - | 19 | 19 |
| 5. | ಹಳೆಯ ಬಿಡಿ ಭಾಗಗಳು | 828 | 401 | 552 | 399 | 2180 |

**ಹರಾಜಿನ ಷರತ್ತು ಮತ್ತು ನಿಯಮಗಳು:-**

1. ಅನುಪಯುಕ್ತ ವಸ್ತುಗಳ ಖರೀದಿಗೆ ಟೆಂಡರ್‌ನಲ್ಲಿ ಬಯಸುವ ಆಸಕ್ತರು ರೂ.1000-00 (ಒಂದು ಸಾವಿರದ ರೂಪಾಯಿ)ಗಳ ಠೇವಣಿಯ ಹಣವನ್ನು "ಪೊಲೀಸ್ ಅಧೀಕ್ಷಕರು ಹಾಸನ ಜಿಲ್ಲೆ" ಇವರ ಹೆಸರಿನಲ್ಲಿ ತೆಗೆಸಿದ ಖುಲ್ಲಾ ಡಿಡಿ. ಸಹಿತ ಇಂತಹ ವರ್ಷದ ಅನುಪಯುಕ್ತ ಟೈರ್, ಟ್ಯೂಬು, ಬಿಡಿಭಾಗಗಳ, ಬ್ಯಾಟರಿಗಳ ಖರೀದಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿದ ನಿಮ್ಮ ಮೊಹರಾದ ಟೆಂಡರುಗಳನ್ನು ದಿನಾಂಕ: 4.8.2004 ರ ಸಂಜೆ 4 ಗಂಟೆ ಒಳಗಾಗಿ ಈ ಕಛೇರಿಗೆ ತಲುಪಿಸಬೇಕು (ಟೆಂಡರ್ ಫಾರಂ ನಮೂನೆ ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ)
2. ಟೆಂಡರುಗಳನ್ನು ಸಲ್ಲಿಸದೇ ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ: 5.8.2004 ರಂದು ಹರಾಜು ನಡೆಯುವ ಸ್ಥಳದಲ್ಲಿ ಹರಾಜು ಪ್ರಾರಂಭವಾಗುವ ಮುಂಚೆ ಠೇವಣಿ ಹಣ ರೂ. 1000-00 ನಗದಾಗಿ ಪಾವತಿಸಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು ಠೇವಣಿ ಹಣ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಈ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರು ಹಾಸನ ಜಿಲ್ಲೆ ಇವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಾಗಲಿ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗಪಡಿಸುವುದು. ಟೆಂಡರುದಾರರು ಅಥವಾ ಸವಾಲುದಾರರು ಇವರಲ್ಲಿ ಯಾರು ಹೆಚ್ಚಿನ ಬೆಲೆಗೆ ಕೇಳಿರುವರೋ ಅವರನ್ನು ಯಶಸ್ವಿ ಟೆಂಡರ್: ಸವಾಲುದಾರರೆಂದು ಪರಿಗಣಿಸಲಾಗುವುದು.
4. ಯಶಸ್ವಿ ಟೆಂಡರ್: ಬಿಡ್‌ದಾರರು ಅಂಗೀಕೃತವಾದ ಅತಿ ಹೆಚ್ಚಿನ ಮೊತ್ತದ ಶೇ. 25 ರಷ್ಟು ಮೊತ್ತವನ್ನು ಹರಾಜಿನ ಸ್ಥಳದಲ್ಲಿಯೇ ನಗದಾಗಿ ತುಂಬಬೇಕು. ಯಾವುದೇ ಠೇವಣಿ ಹಣಕ್ಕೆ ಬಡ್ಡಿ ನೀಡಲಾಗುವುದಿಲ್ಲ. ಮೈಸೂರು ವಲಯ ಕಛೇರಿಯಿಂದ ಅನುಮೋದನೆ ಬಂದ ನಂತರ ಬಾಕಿ ಹಣವನ್ನು ಹಾಗೂ ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಸಹಿತ ಪಾವತಿಸಿದ ನಂತರ ಅನುಪಯುಕ್ತ ವಸ್ತುಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ಯಶಸ್ವಿದಾರರ ವಶಕ್ಕೆ ಕೊಡಲಾಗುವುದು.
5. ಎಲ್ಲಾ ಹಣವನ್ನು "ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ" ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಿ ರಸೀದಿ ಪಡೆಯಬೇಕು ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸಲಾಗುವುದಿಲ್ಲ.
6. ಹರಾಜು ಮುಗಿದ ಕೂಡಲೇ ಯಶಸ್ವಿಯಾಗದವರ ಠೇವಣಿ ಹಣವನ್ನು ಹಿಂತಿರುಗಿಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.
7. ಟೆಂಡರ್: ಹರಾಜಿನಲ್ಲಿ ಭಾಗವಹಿಸಿದ್ದ ಯಶಸ್ವಿ ಟೆಂಡರ್: ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಬಂದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿರುವ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು.
8. ಹರಾಜಿನಲ್ಲಿ ಯಾವುದೇ ಬಿಡ್‌ನ್ನು ಯಾವುದೇ ಕಾರಣಕ್ಕಾಗಿ ತಿರಸ್ಕರಿಸುವ ಇಲ್ಲದೆ ಪುರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ ಇವರು ಹೊಂದಿರುತ್ತಾರೆ. ಹಾಗೂ ಇವರ ತೀರ್ಮಾನವೆ ಅಂತಿಮವಾಗಿರುತ್ತದೆ.
9. ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ ವಿವಾದ ಉಂಟಾದಲ್ಲಿ ಮಾನ್ಯ ಐಜಿಪಿ ದಕ್ಷಿಣ ವಲಯ ಮೈಸೂರು ರವರ ನಿರ್ಣಯವೇ ಅಂತಿಮವಾಗಿರುತ್ತದೆ.
10. ಹರಾಜಿನಲ್ಲಿ ಭಾಗಹಿಸುವವರೆಲ್ಲರೂ ಸರ್ಕಾರಿ ನಿಯಮಗಳನ್ನು ಪಾಲಿಸತಕ್ಕದ್ದು.
11. ಎಲ್ಲಾ ಬಿಡ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿಸತಕ್ಕದ್ದು.
12. ಭರ್ತಿ ಮಾಡಿದ ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ಬರೆದಿರಬೇಕು. ಟೆಂಡರ್ ಫಾರಂನ ನಮೂನೆಯನ್ನು ಈ ಕೆಳಗೆ ಕೊಡಲಾಗಿದೆ.

**ಟೆಂಡರ್ ಫಾರಂನ ನಮೂನೆ:**

ಗೆ,

ಪೊಲೀಸ್ ಅಧೀಕ್ಷಕರು,
ಹಾಸನ ಜಿಲ್ಲೆ, ಹಾಸನ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ನಂ. ಪಿಎಂಟಿ:19:02-03 ದಿನಾಂಕ: 6.2004 ರಲ್ಲಿ ತಿಳಿಸಿದ ಅನುಪಯುಕ್ತ ................ ವರ್ಷದ ಟೈರು: ಟ್ಯೂಬು ಬಿಡಿಭಾಗಗಳನ್ನು ನಾನು ರೂ........................ (ರೂಪಾಯಿ..........................) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ದಿನಾಂಕ: ತಮ್ಮ ವಿಶ್ವಾಸಿ,
ಸ್ಥಳ: (ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್.256 ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಹಾಸನ ಜಿಲ್ಲೆ, ಹಾಸನ.

**FORM-IV**

**(See Rule 12)**

**NOTICE**

It is hereby notified that the undersigned has changed his/her name from **SHRIDHAR RAMACHANDRA UPPAR** to **SHRIDHAR RAMACHANDRA JADHAV**

PD-112 **SHRIDHAR RAMACHANDRA JADHAV**

**ಕಾರ್ಯಪಾಲಕ ಅಭಿಯಂತರವರ ಕಾರ್ಯಾಲಯ, ಪಿ.ಡಬ್ಲ್ಯೂ.ಡಿ ವಿಭಾಗ, ಚಿತ್ರದುರ್ಗ**

**ಟೆಂಡರ್ ಪ್ರಕಟಣೆ ಸಂಖ್ಯೆ: ಕಾಪಾಅ:ಲೋಇ:ಚಿವಿ:ಎಇ:ನಬಾರ್ಡ-9:03: 2004-2005 ದಿನಾಂಕ: 26ನೇ ಮೇ 2004**

**ದ್ವಿಲಕೋಟೆ ಪದ್ಧತಿ**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಮತ್ತು ಆ್ಯಕ್ಟ್-2000 ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

ಕಾಮಗಾರಿಯ ಟೆಂಡರ್ 2 ಲಕೋಟೆಗಳನ್ನು ಅಂದರೆ 1) ತಾಂತ್ರಿಕ ಬಿಡ್ ಮತ್ತು 2) ಆರ್ಥಿಕ ಬಿಡ್‌ಗಳನ್ನು ಒಳಗೊಂಡಿರುತ್ತದೆ.

1. ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್-'ಬಿ' ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ಏಕಕಾಲಕ್ಕೆ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಮತ್ತು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಾರ್ಯಾಲಯದಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳ ಎದುರು ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4-00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ.ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಗುತ್ತಿಗೆ ದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿರುವ ಅವಧಿ ಮಳೆಗಾಲ ಸೇರಿ | ಕೊನೆಯ ದಿನಾಂಕ | | | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ |
|---|---|---|---|---|---|---|---|---|---|---|
| | | | | | | | ಅರ್ಜಿಗಳನ್ನು ಸ್ವೀಕರಿಸಲು ಸಂಜೆ 5.30 ಗಂಟೆಯವರೆಗೆ | ಟೆಂಡರು ಡಾಕ್ಯುಮೆಂಟ್‌ಗಳನ್ನು ನೀಡಲು ಸಂಜೆ 5.30 ಗಂಟೆಯವರೆಗೆ | ಟೆಂಡರುಗಳನ್ನು ಸ್ವೀಕರಿಸಲು ಸಂಜೆ 4.00 ಗಂಟೆಯವರೆಗೆ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಹೊಳಲ್ಕೆರೆ ತಾಲ್ಲೂಕಿನ ರಾಮಗಿರಿ- ಕಣಿವೆಹಳ್ಳಿ ಮಾರ್ಗ ತಾಳಘಟ್ಟ- ಬಿದರಕೆರೆ ರಸ್ತೆ ಅಭಿವೃದ್ಧಿ | 150.00 | 150000-00 | 15000-00 + ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | 25.06.2004 | 28.06.2004 ರಿಂದ 30.06.2004 | 02.07.2004 | 05.07.2004 |
| 2. | ಹೊಸದುರ್ಗ ತಾಲ್ಲೂಕಿನ ಹಾಗಲಕೆರೆ- ಬೆಲಗೂರು ರಸ್ತೆಯಿಂದ ಕಡೂರು ಗಡಿಯವರೆಗೆ ಮಾರ್ಗ ಬಲ್ಲಾಳಸಮುದ್ರ ಮತ್ತೂರು ರಸ್ತೆ ಅಭಿವೃದ್ಧಿ | 150.00 | 150000-00 | 15000-00 + ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | 25.06.2004 | 28.06.2004 ರಿಂದ 30.06.2004 | 02.07.2004 | 05.07.2004 |

**ನಿಬಂಧನೆಗಳು:**

1. ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
2. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು.
3. ಸತತವಾಗಿ 3 ಬಾರಿ ಖಾಲಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

4. ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
5. ಗುತ್ತಿಗೆದಾರರು ಕಾರ್ಯಾದೇಶ ಪತ್ರ ಸ್ವೀಕರಿಸಿದ ಒಂದು ವಾರದೊಳಗೆ ಗುತ್ತಿಗೆ ಕರಾರು ಮಾಡಿಕೊಳ್ಳದಿದ್ದಲ್ಲಿ ಅಥವಾ ಗುತ್ತಿಗೆ ಕರಾರನ್ನು ಮಾಡಿಕೊಂಡ ನಂತರ ಒಂದು ವಾರದೊಳಗೆ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ ಹೊಣೆ ಮತ್ತು ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ರದ್ದುಪಡಿಸಿ ಇ.ಎಂ.ಡಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
7. ಗುತ್ತಿಗೆದಾರರು ನಿರ್ವಹಿಸಿದ ಕಾಮಗಾರಿಯನ್ನು ಒಂದು ವರ್ಷದವರೆಗೂ ಅವರ ವೆಚ್ಚದಲ್ಲಿ ಸುಸ್ಥಿತಿಯಲ್ಲಿ ಕಾಪಾಡತಕ್ಕದ್ದು.
8. ಗುತ್ತಿಗೆದಾರರು ಟೆಂಡರ್ ಫಾರಂನಲ್ಲಿ ಎಲ್ಲಾ ಪುಟಗಳನ್ನು ಸರಿಯಾಗಿ ತುಂಬಿ ಸಹಿ ಮಾಡಿ ಸಲ್ಲಿಸತಕ್ಕದ್ದು ಮತ್ತು ಗುತ್ತಿಗೆದಾರರು ಇಲಾಖಾ ನಿಯಮಗಳಿಗೆ ಬದ್ಧರಾಗಿರಬೇಕು.
9. ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಒಂದು ಆರ್ಥಿಕ ವರ್ಷದಲ್ಲಿ ಮೇಲ್ಕಂಡ ಕಾಮಗಾರಿಗಳಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ ಕಾಮಗಾರಿಗಳ ಒಟ್ಟು ಮೊತ್ತದ ಶೇಕಡ 30ಕ್ಕೆ ಕಡಿಮೆ ಇಲ್ಲದಂತೆ ಅದೇ ತರಹದ ಒಂದು ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು.
10. ಗುತ್ತಿಗೆದಾರರು ಈ ಹಿಂದೆ ಯಾವುದೇ ಕಾಮಗಾರಿಯನ್ನು ಪೂರ್ಣಗೊಳಿಸದೇ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೇ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು.
11. ಅ. ಗುತ್ತಿಗೆದಾರರು ರಸ್ತೆ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ದಾಖಲಾತಿಗಳನ್ನು ಅಂದರೆ ಸೇಲ್ ಡೀಡ್, ನೋಂದಣಿ ಪ್ರಮಾಣ ಪತ್ರ, ಡೆಲಿವರಿ ಇನ್‌ವಾಯ್ಸ್ ಇತ್ಯಾದಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು.
    1. ಟಿಪ್ಪರ್‌ಗಳು-4 ನಂ.
    2. ಸ್ಟಾಟಿಕ್ ರೋಡ್ ರೋಲರ್ (8/10 ಟನ್ ಸಾಮರ್ಥ್ಯದ) - 2 ನಂ.
    3. ಮೆಕ್ಯಾನಿಕಲ್ ಸ್ಪ್ರೇಯರ್ - 1 ನಂ.
    4. ರಸ್ತೆ ಕಾಮಗಾರಿಗೆ ಅವಶ್ಯಕವಾದ ಯಂತ್ರೋಪಕರಣಗಳನ್ನು ಹೊಂದಿರುವ ಬಗ್ಗೆ ವಿವರ ಸಲ್ಲಿಸತಕ್ಕದ್ದು.
11. ಆ. ಗುತ್ತಿಗೆದಾರರು ರಸ್ತೆ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಅಥವಾ ಬಾಡಿಗೆ ಆಧಾರದಲ್ಲಿ ತರುವವರು ಮಾಲೀಕರಿಂದ 1972ರ ಹೈರ್ ಪರ್ಚೇಸ್ ಆಕ್ಟ್‌ನಂತೆ ಸೂಕ್ತ ಬಾಡಿಗೆ ಕರಾರು ಪತ್ರವನ್ನು ಮೇಲೆ 11(ಅ) ರಲ್ಲಿ ತಿಳಿಸಿರುವ ಎಲ್ಲಾ ಅವಶ್ಯಕ ದಾಖಲಾತಿಗಳೊಂದಿಗೆ ಹಾಗೂ ಮಾಲೀಕರು ಸದರಿ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಬಗ್ಗೆ ಅಗತ್ಯ ದಾಖಲಾತಿಗಳನ್ನು ಹಾಗೂ ಯಾವುದೇ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಖರೀದಿಸಿದ್ದಲ್ಲಿ, ಆ ಸಂಸ್ಥೆಗೆ ಸದರಿ ಯಂತ್ರೋಪಕರಣಗಳನ್ನು ಅಡ ಇಟ್ಟಿದ್ದಲ್ಲಿ, ಆ ಸಂಸ್ಥೆಯಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದು ಈ ಎಲ್ಲಾ ದಾಖಲಾತಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಸಲ್ಲಿಸತಕ್ಕದ್ದು. ಹಾಟ್ ಮಿಕ್ಸ್ ಪ್ಲಾಂಟ್ ಸ್ಥಾಪಿಸಿರುವ ಸ್ಥಾವರದ ಸ್ಥಳವನ್ನು ತಪ್ಪದೇ **ತಾಂತ್ರಿಕ ಬಿಡ್‌ನೊಂದಿಗೆ** ನಮೂದಿಸತಕ್ಕದ್ದು.
    1. 20/30 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್‌ಮಿಕ್ಸ್ ಪ್ಲಾಂಟ್-1 ನಂ.
    2. ಮೆಕ್ಯಾನಿಕಲ್ ಪೇವರ್ ಫಿನಿಷರ್-1 ನಂ.

**ಸೂಚನೆ :** 1. ಗುತ್ತಿಗೆದಾರರು ಸದರಿ ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪತ್ರಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
2. ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

11. ಗುತ್ತಿಗೆದಾರರು ಅರ್ಜಿಯೊಂದಿಗೆ ಈ ಕೆಳಕಂಡ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು, ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ಒದಗಿಸಿದ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಷೆಡ್ಯೂಲ್‌ನ್ನು ನೀಡಲಾಗುವುದು. ಈ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೇ ಇರುವಂತಹ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
    1) ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು.
    2) ಅರ್ಜಿಯ ಜೊತೆಯಲ್ಲಿ ಮುಂಗಡ ಹಣ ಠೇವಣಿ (ಇ.ಎಂ.ಡಿ) ಯನ್ನು ಷೆಡ್ಯೂಲ್ಡ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್/ ಡಿಪಾಜಿಟ್ ಕಾಲ್ ರಿಸೀಪ್ಟ್: ಬ್ಯಾಂಕ್ ಗ್ಯಾರಂಟಿ ಅಥವಾ ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬೇಕು ಹಾಗೂ ಇದರ ವ್ಯಾಲಿಡಿಟಿ ಅವಧಿ ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ಅವಧಿ ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗಿರುತ್ತದೆ.
    3) ಗುತ್ತಿಗೆದಾರರು ಹಿಂದಿನ ಸಾಲಿನ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ನೋಂದಣಿ ಪ್ರಮಾಣ ಪತ್ರವನ್ನು ಮತ್ತು ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಇಲಾಖೆಯಿಂದ ಪಡೆದು ಲಗತ್ತಿಸಬೇಕು.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಪಿ.ಆರ್.255 ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ.

## ಅರಣ್ಯ ಇಲಾಖೆ

## ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ ಬೆಂಗಳೂರು-560076

## ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2:ಬಿಯುಡಿ:ಸಿಆರ್:8:2004-05 ದಿನಾಂಕ: 4ನೇ ಜೂನ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2004-2005ನೇ ಸಾಲಿಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ಬೆಂಗಳೂರು ಸಂಶೋಧನಾ ವಲಯದ ದೊರೆಸಾನಿಪಾಳ್ಯ ಸಂಶೋಧನಾ ಕೇಂದ್ರದಲ್ಲಿ ಕಾಂಪೌಂಡ್ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಸದರಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ.

ದಿನಾಂಕ: 24.6.2004 ರಂದು 3.00 ಗಂಟೆಗೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 3.30 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 29.6.2004 ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಮತ್ತು ಟೆಂಡರ್ ಲಕೋಟೆಯನ್ನು 3.30 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ವಲಯ | ಕಾಮಗಾರಿಗಳ ವಿವರ | ಅಂದಾಜು ಭೌತಿಕ ಪರಿಮಾಣ | ಅಂದಾಜು ಮೊತ್ತ | ನಿಗದಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಕ್ತಾಯ ಗೊಳಿಸುವ ದಿನಾಂಕ: | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಬೆಂಗಳೂರು | 1. 2004-05ನೇ ಸಾಲಿನಲ್ಲಿ ದೊರೆಸಾನಿಪಾಳ್ಯ ಸಂಶೋಧನಾ ಕೇಂದ್ರದ ಸುತ್ತು ಕಾಂಪೌಂಡ್ ಕಾಮಗಾರಿಯನ್ನು ತೆಗೆದುಕೊಳ್ಳುವ ಬಗ್ಗೆ (ಲೋಕೋಪಯೋಗಿ ಇಲಾಖೆ ಪರಿಶೀಲಿಸಿದ ಅಂದಾಜು ಪಟ್ಟಿಯಂತೆ) | 238 Rmtr. | 440000.00 | 11000.00 | 31.10.2004 | |

ಟೆಂಡರ್ ನಮೂನೆಯನ್ನು ದಿನಾಂಕ: 23.6.2004 ಮತ್ತು 24.6.2004ರ ರಜಾ ದಿನ ಬಿಟ್ಟು 1.00 ಗಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ.100.00 (ತೆರಿಗೆ ಸೇರಿ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಶೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 28.6.2004 ರಂದು 1.00 ಗಂಟೆಯವರೆಗೆ ಪಡೆಯಬಹುದಾಗಿದೆ.

**ನಿಬಂಧನೆಗಳು:**

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ.100.00 (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 23.6.2004 ಮತ್ತು 24.6.2004 ರಂದು ಕಛೇರಿ ಕೆಲಸದ ವೇಳೆಯಲ್ಲಿ 1.00 ಗಂಟೆವರೆಗೆ ಪಡೆಯಬಹುದು ಮತ್ತು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ತಮ್ಮ ಹೆಸರನ್ನು ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದಲ್ಲಿ ಅಂತವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 24.6.2004 ರಂದು ಸಂಜೆ 3.00 ಗಂಟೆಯವರೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಪ್ರತ್ಯೇಕವಾಗಿ ಇಡುವ ಟೆಂಡರ್ ಡಬ್ಬದಲ್ಲಿ ಹಾಕಬೇಕು. ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 29.6.2004 ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ

ಭರ್ತಿ ಮಾಡಿದ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

4. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.
5. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಮೊತ್ತಕ್ಕೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
6. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸದಿದ್ದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನಾ ವೃತ್ತ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
7. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
8. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
9. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಸರ್ಕಾರದಿಂದ ಬಿಡುಗಡೆಗೊಳ್ಳುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
10. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ತನಿಖೆ ಪುಸ್ತಕದೊಂದಿಗೆ (ಎಫ್ ಎನ್ ಬಿ: ಎಂಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ ಮಾರಾಟ ತೆರಿಗೆಯನ್ನು ಮತ್ತು ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸ ಬಂದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
11. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು, ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ: ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು: ಬಿಲ್‌ಗಳಲ್ಲಿ ಕಟಾವು ಮಾಡಲಾಗುವುದು ಮತ್ತು ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
12. ಸದರಿ ಗುತ್ತಿಗೆದಾರರು ಕಟ್ಟಡ ಕೆಲಸಗಳು ಮತ್ತು ಕಾಂಪೌಂಡ್ ಕೆಲಸಗಳ ಬಗ್ಗೆ ಕನಿಷ್ಠ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ದೃಢೀಕೃತ ಪ್ರಮಾಣಪತ್ರವನ್ನು ಒದಗಿಸಬೇಕು.
13. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು, ಇಲಾಖೆಯು ಯಾವುದೇ ನಷ್ಟ ಮತ್ತಿತರೆಗೆ ಜವಾಬ್ದಾರಿಯಲ್ಲ.
14. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ (ಅಪ್ರಾಕ್ಸಿಮೇಟ್). ಹಣವನ್ನು ಪಾವತಿಸುವಾಗ ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದಂತೆ ಅಥವಾ ಅದಕ್ಕಿಂತ ಕಡಿಮೆ ನಮೂದಿಸಿರುವ ದರದಂತೆ ಪಾವತಿಸಲಾಗುವುದು.
15. ಕೆಲಸವನ್ನು ಲೋಕೋಪಯೋಗಿ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯಂತೆ ಮಾಡಬೇಕಾಗಿರುತ್ತದೆ.

ಪಿ.ಆರ್.273 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

## ಲೋಕೋಪಯೋಗಿ ಇಲಾಖೆ

## ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ವಿಜಾಪೂರ

## ದ್ವಿಲಕೋಟೆ ಪದ್ಧತಿಯಲ್ಲಿ ಐಟಂವಾರು ಟೆಂಡರ್ ಅಧಿಸೂಚನೆ

## ನಂ: ಲೋಇ:ವಿಜಾ:ಸಇಂ:1:ನಬಾರ್ಡ್-9/2004-05/443 ದಿನಾಂಕ: 24ನೇ ಮೇ 2004

ನಬಾರ್ಡ್ ಯೋಜನೆ ಅಡಿಯಲ್ಲಿ 2004-05ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿ ಮಾಡಿದ "ಒಂದನೇ ದರ್ಜೆ ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರುಗಳನ್ನು ಪ್ರಕಟಿಸಲಾಗಿದೆ. ಈ ಕಾಮಗಾರಿಗಳಿಗೆ ಎರಡು ಕವರುಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ, ವಿಜಾಪುರ ವಿಭಾಗ ವಿಜಾಪೂರ ಹಾಗೂ ಅಧೀಕ್ಷಕ ಇಂಜನೀಯರರು ಲೋಕೋಪಯೋಗಿ ಇಲಾಖೆ, ಬೆಳಗಾಂವ ವೃತ್ತ, ಬೆಳಗಾಂವ ಕಚೇರಿಗಳಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರು ಹಾಗೂ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಮರು ದಿನ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ ಇಲಾಖೆ, ವಿಜಾಪೂರ ವಿಭಾಗ ಕಛೇರಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರ್‌ಗಳನ್ನು ಸಾಮಾನ್ಯ ಅಧಿನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ "ಟೆಕ್ನಿಕಲ್ ಬಿಡ್"ನ್ನು ಒಂದು ಕವರಿನಲ್ಲಿ ಮತ್ತು ಫೈನಾನ್ಸಿಯಲ್ ಬಿಡ್"ನ್ನು ಇನ್ನೊಂದು ಕವರಿನಲ್ಲಿ ಹಾಕಿ ಮೊಹರು ಬಂದ್ ಮಾಡಿದ "ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್" ಕವರ್‌ಗಳನ್ನು ಮೂರನೇ ಕವರಿನಲ್ಲಿ ಹಾಕಿ ಕೆಲಸದ ಹೆಸರನ್ನು ನಮೂದಿಸಿ ಮೊಹರ್ ಬಂದ್ ಮಾಡಿ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

**ಟೆಂಡರ್ ಅವಧಿಯ ಅನುಸೂಚಿ ಈ ಕೆಳಗಿನಂತಿದೆ:**

ಅ) ಅರ್ಜಿಸಲ್ಲಿಸಲು ಕೊನೆಯ ದಿನಾಂಕ: 29.6.2004 ಅಥವಾ ಅದಕ್ಕಿಂತ ಮೊದಲು ಕಚೇರಿ ವೇಳೆಯಲ್ಲಿ ಮಾತ್ರ

ಬ) ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ಪೂರೈಸುವ ದಿನಾಂಕ: 03.07.2004 ರಂದು ಕಚೇರಿಯ ವೇಳೆಯಲ್ಲಿ ಮಾತ್ರ

ಕ) ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್‌ಗಳನ್ನು ಸಲ್ಲಿಸುವ ದಿನಾಂಕ: 07.07.2004 ರಂದು ಮಧ್ಯಾಹ್ನ 4.00 ಗಂಟೆಯವರೆಗೆ ಮಾತ್ರ

(ಡ) ಟೆಕ್ನಿಕಲ್ ಬಿಡ್‌ನ್ನು ತೆರೆಯುವ ದಿನಾಂಕ: 8.07.2004

| ಅನಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ. | ಮುಂಗಡ ಠೇವಣಿಹಣ ರೂ.ಗಳಲ್ಲಿ | ಖಾಲಿ ಟೆಂಡರ್ ಫಾರ್ಮ್ ಬೆಲೆ (ಹಿಂದಿರುಗಿಸಲಾಗುವುದಿಲ್ಲ) ರೂ.ಗಳಲ್ಲಿ (ತೆರಿಗೆ ಸಹಿತ) | ಕಾಮಗಾರಿಯನ್ನು ಪೂರ್ತಿಗೊಳಿಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಸಹಿತ) |
|---|---|---|---|---|---|
| 1 | 2 | 3 | 4 | 5 | 6 |
| 1. | ವಿಜಾಪೂರ ತಾಲೂಕಿನ ಜುಮನಾಳ ದದ್ದಾಮಟ್ಟಿ ಸಾರವಾಡ ರಸ್ತೆ ಸುಧಾರಣೆ | 116.00 | 1,16,000/- | 5,500/- | 12 ತಿಂಗಳು |
| 2. | ಸಿಂದಗಿ ತಾಲೂಕಿನ ಕೋರಳ್ಳಿ ಬಳಗಾನೂರ-ಸುರಗಿಹಳ್ಳಿ ರಸ್ತೆ ಸುಧಾರಣೆ. | 150.00 | 1,50,000/- | 5,500/- | 12 ತಿಂಗಳು. |

**ಸೂಚನೆ: ಪೂರ್ವ ಅರ್ಹತೆಗೆ ಬೇಕಾಗುವ ವಿವರಗಳು:**

1 ಈ ಕಾಮಗಾರಿಯನ್ನು ಅವಶ್ಯಕ ಹಾಟ್ ಮಿಕ್ಸ್ ಪ್ಲಾಂಟ್, ಸ್ಪ್ರೇಯರ್, ಪೇವರ್, ರೋಡ್ ರೋಲರ್ ಇವುಗಳು ತಮ್ಮ ಸ್ವಂತ ಮಾಲಿಕತ್ವದಲ್ಲಿ ಇರುವುದಾಗಲಿ ಅಥವಾ ಬಾಡಿಗೆಯ ಮೇಲೆ ತರುವ ಬಗ್ಗೆ ಸೂಕ್ತ ದಾಖಲೆಗಳನ್ನು ಟೆಕ್ನಿಕಲ್ ಬಿಡ್ ಜೊತೆಗೆ ಲಗತ್ತಿಸುವುದು. ಗುತ್ತಿಗೆದಾರರು ಇಂತಹದೇ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇ.30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ ಐದು ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. ಅಲ್ಲದೇ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಹಣ ಪಾವತಿಯಾಗಿರಬೇಕು. ಇದರ ಬಗ್ಗೆ ದೃಢೀಕೃತ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಲಗತ್ತಿಸಬೇಕು.

2 ಕಾಲಂ ನಂ. 4ರಲ್ಲಿ ನಮೂದಿಸಿರುವಂತೆ ಇ.ಎಂ.ಡಿ. ಹಣವನ್ನು ಕಾರ್ಯನಿರ್ವಾಹಕ ಅಭಿಯಂತರರು ಲೋ.ಇ. ವಿಜಾಪುರ ವಿಭಾಗ, ವಿಜಾಪುರ ಇವರ ಹೆಸರಿನಲ್ಲಿರುವ ನಗದು/ನಿಗಧಿತ ಠೇವಣಿ/ಕರ್ನಾಟಕ ಸರಕಾರದ ಟ್ರೆಜರಿ ಚಲನ್/ಬ್ಯಾಂಕ್ ಗ್ಯಾರಂಟಿ/ಡಿಪಾಜಿಟ್ ಕಾಲ್ ರಿಸಿಪ್ಟ್/ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಟೆಕ್ನಿಕಲ್ ಬಿಡ್ ಜೊತೆಗೆ ಲಗತ್ತಿಸಬೇಕು. ಹಾಗೆ ಮಾಡದಿದ್ದಲ್ಲಿ ಗುತ್ತಿಗೆ ಪತ್ರಗಳನ್ನು ತಿರಸ್ಕರಿಸಲಾಗುವುದು.

3 ಕಾಮಗಾರಿಗೆ ಬೇಕಾಗುವ ಸಾಮಗ್ರಿಗಳನ್ನು ಗುತ್ತಿಗೆದಾರರು ಸ್ವತಃ ತಂದು ಕೆಲಸ ನಿರ್ವಹಿಸುವುದು; ಇಲಾಖೆ ವತಿಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ, ಸಾಮಗ್ರಿಗಳ ಗುಣಮಟ್ಟವನ್ನು ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಪರೀಕ್ಷಿಸಿ ಗುಣಮಟ್ಟದ ಬಗ್ಗೆ ಖಚಿತಪಡಿಸಿಕೊಂಡು ನಂತರ ಕಾಮಗಾರಿಗೆ ಉಪಯೋಗಿಸಬಹುದು.

4 ಕೆಲಸ ಮುಗಿದ ನಂತರ 1(ಒಂದು) ವರ್ಷದ ಅವಧಿಯವರೆಗೆ ಗುತ್ತಿಗೆದಾರರೇ ನಿರ್ವಹಣೆ ಮಾಡತಕ್ಕದ್ದು.

5 ಇಚ್ಛೆಯುಳ್ಳ ಗುತ್ತಿಗೆದಾರರು ಈ ಮೇಲಿನ ಕಾಮಗಾರಿಗಳಿಗೆ ಅರ್ಜಿಗಳನ್ನು ಸಲ್ಲಿಸಬಹುದು. ಅರ್ಜಿಜೊತೆಗೆ ಕಾಲಂ ನಂ.5 ರಲ್ಲಿ ನಮೂದಿಸಿದ ಟೆಂಡರ್ ಫಾರ್ಮ್ ಬೆಲೆಯನ್ನು ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಲೋ.ಇ.ವಿಜಾಪುರ ವಿಭಾಗ, ವಿಜಾಪುರ ಇವರ ಹೆಸರಿನಲ್ಲಿರಬೇಕು.

6 ಖುಲ್ಲಾ ಗುತ್ತಿಗೆ ಪತ್ರಗಳನ್ನು ಪಡೆದುಕೊಂಡು ಗುತ್ತಿಗೆದಾರರು ತಮ್ಮ ಮೊಹರ ಬಂದ್ ಗುತ್ತಿಗೆ ಪತ್ರಗಳನ್ನು ಕಡ್ಡಾಯವಾಗಿ ಪೆಟ್ಟಿಗೆಯಲ್ಲಿ ಹಾಕಬೇಕು.

7 ಯಾವ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ನಿರಾಕರಿಸುವ ಹಕ್ಕನ್ನು ಗುತ್ತಿಗೆ ಸ್ವೀಕರಿಸುವ ಸಮರ್ಥ ಅಧಿಕಾರಿಗಳು ಕಾದಿರಿಸಿಕೊಂಡಿದ್ದಾರೆ.

8 ಸದರಿ ಕೆಲಸದ ಠೇವಣಿ ಕ್ರಮ ಬದ್ಧತೆಯ ಅವಧಿ (ವ್ಯಾಲಿಡಿಟಿ ಪಿರಿಯಡ್) 90 ದಿನಗಳ ಅವಧಿ ಒಳಗೊಂಡಿರಬೇಕು.

ಸೂಚನೆ:

1. ಇನ್ನೂ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕಚೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
2. ಮೇಲೆ ನಮೂದಿಸಿದ ಯಾವುದೆ ದಿನಾಂಕ ಸಾರ್ವತ್ರಿಕ ರಜಾ ದಿನವಾದರೆ ಅದರ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

ಬಿ. ಪಿ. ಕೆಂಗನಾಳ

ಪಿ.ಆರ್.263 ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ವಿಭಾಗ, ವಿಜಾಪೂರ.

## ಲೋಕೋಪಯೋಗಿ ಇಲಾಖೆ

## ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ವಿಜಾಪೂರ

## ದ್ವಿಲಕೋಟೆ ಪದ್ಧತಿಯಲ್ಲಿ ಐಟಂವಾರು ಟೆಂಡರ್ ಅಧಿಸೂಚನೆ

## ನಂ: ಲೋಇ:ವಿಜಾ:ಸಇಂ:1:ನಬಾರ್ಡ್-9/2004-05/444 ದಿನಾಂಕ: 24ನೇ ಮೇ 2004

ನಬಾರ್ಡ್ ಯೋಜನೆ ಅಡಿಯಲ್ಲಿ 2004-05ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣೆ ಮಾಡಿದ "ಒಂದನೇ ದರ್ಜೆ ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರುಗಳನ್ನು ಪ್ರಕಟಿಸಲಾಗಿದೆ. ಈ ಕಾಮಗಾರಿಗಳಿಗೆ ಎರಡು ಕವರುಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ, ವಿಜಾಪುರ ವಿಭಾಗ ವಿಜಾಪೂರ ಹಾಗೂ ಅಧೀಕ್ಷಕ ಇಂಜನೀಯರರು ಲೋಕೋಪಯೋಗಿ ಇಲಾಖೆ, ಬೆಳಗಾಂವ ವೃತ್ತ, ಬೆಳಗಾಂವ ಕಚೇರಿಗಳಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರು ಹಾಗೂ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಮರು ದಿನ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ ಇಲಾಖೆ, ವಿಜಾಪೂರ ವಿಭಾಗ ಕಛೇರಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರ್‌ಗಳನ್ನು ಸಾಮಾನ್ಯ ಅಧಿನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ "ಟೆಕ್ನಿಕಲ್ ಬಿಡ್"ನ್ನು ಒಂದು ಕವರಿನಲ್ಲಿ ಮತ್ತು ಫೈನಾನ್ಸಿಯಲ್ ಬಿಡ್"ನ್ನು ಇನ್ನೊಂದು ಕವರಿನಲ್ಲಿ ಹಾಕಿ ಮೊಹರು ಬಂದ್ ಮಾಡಿದ "ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್" ಕವರ್‌ಗಳನ್ನು ಮೂರನೇ ಕವರಿನಲ್ಲಿ ಹಾಕಿ ಕೆಲಸದ ಹೆಸರನ್ನು ನಮೂದಿಸಿ ಮೊಹರ್ ಬಂದ್ ಮಾಡಿ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

### ಟೆಂಡರ್ ಅವಧಿಯ ಅನುಸೂಚಿ ಈ ಕೆಳಗಿನಂತಿದೆ:

ಅ) ಅರ್ಜಿಸಲ್ಲಿಸಲು ಕೊನೆಯ ದಿನಾಂಕ: 17.6.2004 ಅಥವಾ ಅದಕ್ಕಿಂತ ಮೊದಲು ಕಚೇರಿ ವೇಳೆಯಲ್ಲಿ ಮಾತ್ರ

ಬ) ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ಪೂರೈಸುವ ದಿನಾಂಕ: 22.06.2004 ರಂದು ಕಚೇರಿಯ ವೇಳೆಯಲ್ಲಿ ಮಾತ್ರ

ಕ) ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್‌ಗಳನ್ನು ಸಲ್ಲಿಸುವ ದಿನಾಂಕ: 26.06.2004 ರಂದು ಮಧ್ಯಾಹ್ನ 4.00 ಗಂಟೆಯವರೆಗೆ ಮಾತ್ರ

'(ಡ) ಟೆಕ್ನಿಕಲ್ ಬಿಡ್‌ನ್ನು ತೆರೆಯುವ ದಿನಾಂಕ: 28.06.2004

| ಅನಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ. | ಮುಂಗಡ ಠೇವಣಿಹಣ ರೂ.ಗಳಲ್ಲಿ | ಖಾಲಿ ಟೆಂಡರ್ ಫಾರ್ಮ್ ಬೆಲೆ (ಹಿಂದಿರುಗಿಸಲಾಗುವುದಿಲ್ಲ) ರೂ.ಗಳಲ್ಲಿ (ತೆರಿಗೆ ಸಹಿತ) | ಕಾಮಗಾರಿಯನ್ನು ಪೂರ್ತಿಗೊಳಿಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಸಹಿತ) |
|---|---|---|---|---|---|
| 1 | 2 | 3 | 4 | 5 | 6 |
| 1. | ಬ. ಬಾಗೇವಾಡಿ ತಾಲೂಕಿನ ಎನ್.ಎಚ್. 13ಗೆ ಕೂಡುವ ಮಲಘಾಣ ಮಸೂತಿ ಕೂಡಗಿ ತಾಂಡಾ ರಸ್ತೆ ಸುಧಾರಣೆ (ಮೊದಲನೆ ಹಂತ) | 49.00 | 49,000/- | 3300/- | 6 ತಿಂಗಳು |
| 2. | ವಿಜಾಪೂರ ತಾಲೂಕಿನ ಯತ್ನಾಳ-ಗುಡ್ಡಾಪೂರ ರಸ್ತೆ ಸುಧಾರಣೆ | 40.00 | 40,000/- | 3300/- | 6 ತಿಂಗಳು |
| 3. | ಸಿಂಧಗಿ ತಾಲೂಕಿನ ಬಗಲೂರ ಬ್ರಿಡ್ಜ್ ಕಮ್ ಬ್ಯಾರೇಜ್‌ದಿಂದ ನಾರಾಯಣಪೂರ- ಹುಲ್ಲೂರ ರಸ್ತೆ ಸುಧಾರಣೆ. | 80.00 | 80,000/- | 5,500/- | 12 ತಿಂಗಳು |
| 4. | ಸಿಂಧಗಿ ತಾಲೂಕಿನ ಬಿಜಾಪೂರ-ಸಿಂಧಗಿ ರಸ್ತೆಯಿಂದ ಕೊಕಟನೂರ-ಕೋರವಾರ- ಕೊಂಡಗೂಳಿ ರಸ್ತೆ ಸುಧಾರಣೆ (ಮೊದಲನೆ ಹಂತ) | 80.00 | 80,000/- | 5,500/- | 12 ತಿಂಗಳು |
| 5. | ಬ. ಬಾಗೇವಾಡಿ ತಾಲೂಕಿನ ಅರೆಶಂಕರ- ಇಟಗಿ-ಜೀರಲಭಾವಿ-ಮುದ್ದಾಪೂರ ರಸ್ತೆ ಸುಧಾರಣೆ | 60.00 | 60,000/- | 5,500/- | 9 ತಿಂಗಳು |

**ಸೂಚನೆ: ಪೂರ್ವ ಅರ್ಹತೆಗೆ ಬೇಕಾಗುವ ವಿವರಗಳು:**

1. ಈ ಕಾಮಗಾರಿಯನ್ನು ಅವಶ್ಯಕ ಹಾಟ್ ಮಿಕ್ಸ್ ಪ್ಲಾಂಟ್, ಸ್ಪ್ರೇಯರ್, ಪೇವರ್, ರೋಡ್ ರೋಲರ್ ಇವುಗಳು ತಮ್ಮ ಸ್ವಂತ ಮಾಲಿಕತ್ವದಲ್ಲಿ ಇರುವುದಾಗಲಿ ಅಥವಾ ಬಾಡಿಗೆಯ ಮೇಲೆ ತರುವ ಬಗ್ಗೆ ಸೂಕ್ತ ದಾಖಲೆಗಳನ್ನು ಟೆಕ್ನಿಕಲ್ ಬಿಡ್ ಜೊತೆಗೆ ಲಗತ್ತಿಸುವುದು. ಗುತ್ತಿಗೆದಾರರು ಇಂತಹದೇ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇ.30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ ಐದು ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. ಅಲ್ಲದೇ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಹಣ ಪಾವತಿಯಾಗಿರಬೇಕು. ಇದರ ಬಗ್ಗೆ ದೃಢೀಕೃತ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಲಗತ್ತಿಸಬೇಕು.
2. ಕಾಲಂ ನಂ. 4ರಲ್ಲಿ ನಮೂದಿಸಿರುವಂತೆ ಇ.ಎಂ.ಡಿ. ಹಣವನ್ನು ಕಾರ್ಯನಿರ್ವಾಹಕ ಅಭಿಯಂತರರು ಲೋ.ಇ. ವಿಜಾಪುರ ವಿಭಾಗ, ವಿಜಾಪುರ ಇವರ ಹೆಸರಿನಲ್ಲಿರುವ ನಗದು/ನಿಗದಿತ ಠೇವಣಿ/ಕರ್ನಾಟಕ ಸರಕಾರದ ಟ್ರೆಜರಿ ಚಲನ್/ಬ್ಯಾಂಕ್ ಗ್ಯಾರಂಟಿ/ಡಿಪಾಜಿಟ್ ಕಾಲ್ ರಿಸಿಪ್ಟ್/ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಟೆಕ್ನಿಕಲ್ ಬಿಡ್ ಜೊತೆಗೆ ಲಗತ್ತಿಸಬೇಕು. ಹಾಗೆ ಮಾಡದಿದ್ದಲ್ಲಿ ಗುತ್ತಿಗೆ ಪತ್ರಗಳನ್ನು ತಿರಸ್ಕರಿಸಲಾಗುವುದು.
3. ಕಾಮಗಾರಿಗೆ ಬೇಕಾಗುವ ಸಾಮಗ್ರಿಗಳನ್ನು ಗುತ್ತಿಗೆದಾರರು ಸ್ವತಃ ತಂದು ಕೆಲಸ ನಿರ್ವಹಿಸುವುದು; ಇಲಾಖೆ ವತಿಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ, ಸಾಮಗ್ರಿಗಳ ಗುಣಮಟ್ಟವನ್ನು ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಪರೀಕ್ಷಿಸಿ ಗುಣಮಟ್ಟದ ಬಗ್ಗೆ ಖಚಿತಪಡಿಸಿಕೊಂಡು ನಂತರ ಕಾಮಗಾರಿಗೆ ಉಪಯೋಗಿಸಬಹುದು.
4. ಕೆಲಸ ಮುಗಿದ ನಂತರ 1(ಒಂದು) ವರ್ಷದ ಅವಧಿಯವರೆಗೆ ಗುತ್ತಿಗೆದಾರರೇ ನಿರ್ವಹಣೆ ಮಾಡತಕ್ಕದ್ದು.
5. ಇಚ್ಛೆಯುಳ್ಳ ಗುತ್ತಿಗೆದಾರರು ಈ ಮೇಲಿನ ಕಾಮಗಾರಿಗಳಿಗೆ ಅರ್ಜಿಗಳನ್ನು ಸಲ್ಲಿಸಬಹುದು. ಅರ್ಜಿಜೊತೆಗೆ ಕಾಲಂ ನಂ.5 ರಲ್ಲಿ ನಮೂದಿಸಿದ ಟೆಂಡರ್ ಫಾರ್ಮ್ ಬೆಲೆಯನ್ನು ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಇಂಜಿನಿಯರರು, ಲೋ.ಇ.ವಿಜಾಪುರ ವಿಭಾಗ, ವಿಜಾಪುರ ಇವರ ಹೆಸರಿನಲ್ಲಿರಬೇಕು.
6. ಖುಲ್ಲಾ ಗುತ್ತಿಗೆ ಪತ್ರಗಳನ್ನು ಪಡೆದುಕೊಂಡು ಗುತ್ತಿಗೆದಾರರು ತಮ್ಮ ಮೊಹರ ಬಂದ್ ಗುತ್ತಿಗೆ ಪತ್ರಗಳನ್ನು ಕಡ್ಡಾಯವಾಗಿ ಪೆಟ್ಟಿಗೆಯಲ್ಲಿ ಹಾಕಬೇಕು.
7. ಯಾವ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ನಿರಾಕರಿಸುವಹಕ್ಕನ್ನು ಗುತ್ತಿಗೆ ಸ್ವೀಕರಿಸುವ ಸಮರ್ಥ ಅಧಿಕಾರಿಗಳು ಕಾದಿರಿಸಿಕೊಂಡಿದ್ದಾರೆ.
8. ಟೆಂಡರಿಗಿಟ್ಟ ಅಂದಾಜು ಮೊತ್ತ ರೂ.50 ಲಕ್ಷಕ್ಕಿಂತ ಕಡಿಮೆ ಇರುವ ಕಾಮಗಾರಿಗಳಿಗೆ ಟೆಕ್ನಿಕಲ್ ಬಿಡ್ (ದ್ವಿಲಕೋಟೆ ಪದ್ಧತಿ) ಇರುವುದಿಲ್ಲ.
9. ಸದರಿ ಕೆಲಸದ ಠೇವಣಿ ಕ್ರಮ ಬದ್ಧತೆಯ ಅವಧಿ (ವ್ಯಾಲಿಡಿಟಿ ಪಿರಿಯಡ್) 90 ದಿನಗಳ ಅವಧಿ ಒಳಗೊಂಡಿರಬೇಕು.

**ಸೂಚನೆ:**

3. ಇನ್ನೂ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕಚೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
4. ಮೇಲೆ ನಮೂದಿಸಿದ ಯಾವುದೇ ದಿನಾಂಕ ಸಾರ್ವತ್ರಿಕ ರಜಾ ದಿನವಾದರೆ ಅದರ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

ಬಿ. ಪಿ. ಕೆಂಗನಾಳ

ಪಿ.ಆರ್.264 ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ವಿಭಾಗ, ವಿಜಾಪೂರ.

**PUBLIC WORKS DEPARTMENT**

**Office of the Executive Engineer, P.W.D. Division, Davanagere, Shimoga Circle, Shimoga**

**TENDER NOTIFICATION No.EE/PWD/DVG/AE-I/CRF/DVG TQ/2004-05/342, Dated:3rd June 04**

**TENDER TIME EXTENSION NOTIFICATION**

**(Two Cover System)**

**Sub :** Improvements of M.D.R. under C.R.F. in Davangere Taluk, Davangere Dist.

**Ref :** 1. This office Notification No. EE/ PWD/ DVG/ AE-1/ CRF/ DVG TQ/ 2004-05/2456, dated:09.03.2004.
2. ..do... 154 dated: 10.05.2004

The following changes have been made in the scheduled time in the notification under references for the work of Improvements to Davangere-Jagalur Road from Ch: 1.00 to 10.00 Km in Davangere Taluk under Central Road Fund (C.R.F).

1. The blank tender forms will be issued on 15.06.2004.
2. The last date for receipt of tenders is on 18.06.2004 up to 4.00 pm.
3. Opening of Technical Bids by the Executive Engineer, P.W.D. Division, Davangere is on 19.06.2004 at 11.30 am. or any other date will be intimated later.
4. Financial Bids of only Technically qualified and Financially capable contractors will be opened on any other date and time to be intimated.
5. Other terms and conditions of the original tender notice remain unchanged.
6. Any clarifications can be had from this office during office hours.

PR-265 Executive Engineer, P.W.D. Division, Davangere.

# ಲೋಕೋಪಯೋಗಿ ಇಲಾಖೆ,
## ಕಾರ್ಯಪಾಲಕ ಅಭಿಯಂತರರವರ ಕಾರ್ಯಾಲಯ, ಲೋ.ಇ.ವಿಭಾಗ, ದಾವಣಗೆರೆ,
## ಟೆಂಡರ್ ಅಧಿಸೂಚನೆ
## (ದ್ವಿಲಕೋಟೆ ಪದ್ಧತಿ)

**ಟೆಂಡರ್ ಪ್ರಕಟಣೆ ಸಂ:ಇಇ:ಪಿಡಬ್ಲ್ಯುಡಿ:ಡಿವಿಜಿ:ಪಿಬಿ:ನಬಾರ್ಡ್-ಆರ್‌ಐಡಿಎಫ್-9/335/2004-05/ ದಿನಾಂಕ:2ನೇ ಜೂನ್ 04**

**ವಿಷಯ :** ನಬಾರ್ಡ್-ಆರ್.ಐ.ಡಿ.ಎಫ್-9 ರ ಧನ ಸಹಾಯದ ಅಡಿಯಲ್ಲಿ ದಾವಣಗೆರೆ ಜಿಲ್ಲೆಯ ರಸ್ತೆಗಳ ಅಭಿವೃದ್ಧಿ.

ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗಾಗಿ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ, ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ಕಾಮಗಾರಿಯ ಹೆಸರನ್ನು ನಮೂದಿಸಿದ ದ್ವಿ ಲಕೋಟೆ ಪದ್ಧತಿಯಲ್ಲಿ, ನಿಗದಿತ ನಮೂನೆಯಲ್ಲಿ ಮೊಹರಾದ ಐಟಂವಾರು ಟೆಂಡರ್‌ನ್ನು ಕರೆಯಲಾಗಿದೆ. ಕಾಮಗಾರಿಯ ಮುಂದೆ ನಮೂದಿಸಿರುವ ದಿನಾಂಕದಂದು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳು ಈ ಕಛೇರಿಯಲ್ಲಿ ಸ್ವೀಕರಿಸುತ್ತಾರೆ. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು, ಕೆಳಗೆ ಸೂಚಿಸಿರುವ ನಿಗದಿತ ದಿನಾಂಕಗಳಂದು ಅಥವಾ ಇನ್ನಾವುದೇ ಅನುಕೂಲಕರ ದಿನಾಂಕದಂದು ಹಾಜರಿರುವ ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುತ್ತದೆ. ಇದು ಐಟಂವಾರು ಟೆಂಡರು ಆಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ) | ಟೆಂಡರ್ ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) ಮೊತ್ತ (ರೂ. ಗಳಲ್ಲಿ) | ಖಾಲಿ ಟೆಂಡರ್ ಪುಸ್ತಕ ಬೆಲೆ (ರೂ. ಗಳಲ್ಲಿ) | ಗುತ್ತಿಗೆ ದಾರರ ದರ್ಜೆ | ಕಾಮಗಾರಿ ಮುಗಿಸಲು ಕಾಲಾವಧಿ | ಟೆಂಡರ್‌ಗಾಗಿ ಅರ್ಜಿ ಸ್ವೀಕರಿಸುವ ದಿನಾಂಕ, ಸಂಜೆ 5.30 ವರೆಗೆ | ಖಾಲಿ ಟೆಂಡರ್ ಫಾರಂ ವಿತರಿಸುವ ದಿನಾಂಕ ಸಂಜೆ 5.30 ವರೆಗೆ | ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ, ಸಂಜೆ 4.00 ವರೆಗೆ | ಟೆಂಡರ್‌ನ ಮಾದರಿ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1. | ದಾವಣಗೆರೆ ತಾ. ಕೊಡಗನೂರು-ಕಾಶೀಪುರ ಮಾರ್ಗ ಕಬ್ಬೂರು, ರಾಮಗೊಂಡನಹಳ್ಳಿ ರಸ್ತೆಯ ಅಭಿವೃದ್ಧಿ | 75.00 | 75.00 | 75,000 | 10,000 + ಕೆ.ಎಸ್.ಟಿ. | 1ನೇ ದರ್ಜೆ ಅಥವಾ ಮೇಲ್ಪಟ್ಟು | 6 ತಿಂಗಳು ಮಳೆಗಾಲದ ಅವಧಿಸೇರಿ | 1.7.04 | 5.7.04 | 8.7.04 | ಐಟಂ ವಾರು |
| 2. | ದಾವಣಗೆರೆ ತಾ: ರಾಷ್ಟ್ರೀಯ ಹೆದ್ದಾರಿ-4 ರಿಂದ ಹುಳಿಯಾರು-ಆನಗೋಡು ರಸ್ತೆ ಯನ್ನು ಸೇರುವ ರಸ್ತೆ ಮಾರ್ಗ ಕರಿಲಕ್ಕೇನ ಹಳ್ಳಿ, ಸುಲ್ತಾನಿಪುರ ರಸ್ತೆ ಅಭಿವೃದ್ಧಿ. | 90.00 | 90.00 | 90,000 | 12,000 + ಕೆ.ಎಸ್.ಟಿ. | 1ನೇ ದರ್ಜೆ ಅಥವಾ ಮೇಲ್ಪಟ್ಟು | 10 ತಿಂಗಳು ಮಳೆಗಾಲದ ಅವಧಿಸೇರಿ | 1.7.04 | 5.7.04 | 8.7.04 | ಐಟಂ ವಾರು |
| 3. | ಚನ್ನಗಿರಿ ತಾ: ಚನ್ನಗಿರಿ-ಹೊಳೆಹೊನ್ನೂರು ರಸ್ತೆಯಿಂದ ಬಸವಾಪುರ, ಗುರುರಾಜಪುರ, ಬಿಆರ್‌ಟಿ ಕಾಲೋನಿ, ಚನ್ನೇಶಪುರ, ಹಿರೇಮಳಲಿವರೆಗೆ ರಸ್ತೆ ಅಭಿವೃದ್ಧಿ. | 75.00 | 75.00 | 75,000 | 10,000 + ಕೆ.ಎಸ್.ಟಿ. | 1ನೇ ದರ್ಜೆ ಅಥವಾ ಮೇಲ್ಪಟ್ಟು | 6 ತಿಂಗಳು ಮಳೆಗಾಲದ ಅವಧಿಸೇರಿ | 1.7.04 | 5.7.04 | 8.7.04 | ಐಟಂ ವಾರು |

**ಷರತ್ತುಗಳು:**

1. ಪೂರ್ವಾರ್ಹತೆಗೆ ಬೇಕಾಗಿರುವ ವಿವರಗಳನ್ನು ಟೆಂಡರ್ ಡಾಕ್ಯುಮೆಂಟ್‌ನಲ್ಲಿ ವಿವರಿಸಲಾಗಿದೆ. ಪ್ರತಿಯೊಬ್ಬ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳು ಹೊಂದಿರುವ ಬಗ್ಗೆ ಅಥವಾ ಮಾಲಿಕತ್ವ ಪಡೆದಿರುವ ಬಗ್ಗೆ ಒಡೆತನದ ಪುರಾವೆಗಳನ್ನು ಒದಗಿಸತಕ್ಕದ್ದು.

| ಯಂತ್ರೋಪಕರಣಗಳು | | ಸಂಖ್ಯೆ | ಒಡೆತನಕ್ಕೆ ಸಂಬಂಧಿಸಿದ ಪುರಾವೆಗಳು |
|---|---|---|---|
| ಅ) | 40/60 ಟಿಪಿಎಚ್ ಹಾಟ್ ಮಿಕ್ಸ್ ಪ್ಲಾಂಟ್ | 1 | ಖರೀದಿ ಇನ್ವಾಯ್ಸ್/ ಖರೀದಿ ಇನ್ವಾಯ್ಸ್ ಬಿಲ್/ಕ್ರಯ ಪತ್ರ/ ಮಾಲೀಕರಿಂದ ಬಾಡಿಗೆ ಕರಾರು ಒಪ್ಪಿಗೆ ಪತ್ರ. |
| ಆ) | ಪೇವರ್ ಫಿನಿಷರ್ | 1 | --ಅದೇ-- |
| ಇ) | ಪವರ್ ರೋಡ್ ರೋಲರ್ | 2 | ಖರೀದಿ ಇನ್ವಾಯ್ಸ್/ಖರೀದಿ ಇನ್ವಾಯ್ಸ್ ಬಿಲ್/ ಕ್ರಯ ಪತ್ರ |
| ಈ) | ಟಿಪ್ಪರ್ಸ್ | 4 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ನೊಂದಣಿ ಪ್ರಮಾಣ ಪತ್ರ. |
| ಉ) | ಮೆಕ್ಯಾನಿಕಲ್ ಸ್ಪ್ರೇಯರ್ | 1 | ಖರೀದಿ ಇನ್ವಾಯ್ಸ್/ ಖರೀದಿ ಇನ್ವಾಯ್ಸ್ ಬಿಲ್/ ಕ್ರಯ ಪತ್ರ |

ಪ್ರತಿಯೊಬ್ಬ ಅರ್ಜಿದಾರರು ಟೆಂಡರ್‌ಗೆ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಪ್ರತಿ ಕಾಮಗಾರಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ಕ್ಕಿಂತ ಕಡಿಮೆ ಇಲ್ಲದ ಮೊತ್ತದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು (1999-2000 ರಿಂದ 2003-04) ಆರ್ಥಿಕ ವರ್ಷಗಳ ಬ್ಲಾಕ್ ಅವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು. ಕಾಮಗಾರಿಗಾಗಿ ಕಾಲಂ 5 ರಲ್ಲಿ ನಿಗದಿಪಡಿಸಿರುವಂತೆ ಇಡುಗಂಟು (ಇಎಂಡಿ) ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ವಿಭಾಗ, ದಾವಣಗೆರೆ ಇವರ ಹೆಸರಿಗೆ ಬರೆದ ಸೆಕ್ಯುರಿಟಿ ಡಿಪಾಜಿಟ್/ ಸರ್ಕಾರಿ ಖಜಾನೆ ಅಥವಾ ಉಪ ಖಜಾನೆಯ ಚಲನ್/ ಬ್ಯಾಂಕ್ ಗ್ಯಾರಂಟಿ ಬಾಂಡ್/ ಡಿಪಾಜಿಟ್ ಅಟ್ ಕಾಲ್ ರಿಸೀಪ್ಟ್/ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳನ್ನು ಮೇಲಿನ ಅಧಿಕಾರಿಗಳ ಕೃಪೆಯಲ್ಲಿ ಒತ್ತೆಯಾಗಿ ಇಡಬೇಕು.

2. ಕಾಮಗಾರಿಯ ಪೂರ್ವಾರ್ಹತೆಗಾಗಿ ಅವಶ್ಯಕ ದಾಖಲೆಗಳನ್ನು ಒಂದು ಲಕೋಟೆಯಲ್ಲಿ ಸೀಲ್ ಮಾಡಿ, ಅದರ ಮೇಲೆ ತಾಂತ್ರಿಕ ಸವಾಲು (ಟೆಕ್ನಿಕಲ್ ಬಿಡ್) ಎಂದು ನಮೂದಿಸಿ, ಅದರಲ್ಲಿ ಕಾಮಗಾರಿಗೆ ಬೇಕಾದ ಇಡುಗಂಟು ಹಣವನ್ನು (ಇಎಂಡಿ) ಅದರಲ್ಲಿ ಲಗತ್ತಿಸಿರಬೇಕು. ಇಡುಗಂಟು ಹಣ ಇಲ್ಲದ ತಾಂತ್ರಿಕ ಸವಾಲು (ಟೆಕ್ನಿಕಲ್ ಬಿಡ್) ನ್ನು ತಿರಸ್ಕರಿಸಲಾಗುವುದು. ಅಂಶವಾರು ದರಗಳನ್ನು ಷೆಡ್ಯೂಲ್-ಬಿ ಯಲ್ಲಿ ನಮೂದಿಸಿ ಆರ್ಥಿಕ ಸವಾಲು (ಫೈನಾನ್ಸಿಯಲ್ ಬಿಡ್) ಒಳಗೊಂಡ ಇನ್ನೊಂದು ಲಕೋಟೆಯನ್ನು ಪ್ರತ್ಯೇಕವಾಗಿ ಫೈನಾನ್ಸಿಯಲ್ ಬಿಡ್ ಎಂದು ನಮೂದಿಸಿ, ಎರಡೂ ಲಕೋಟೆಗಳನ್ನು ಇನ್ನೊಂದು ದೊಡ್ಡ ಲಕೋಟೆಯಲ್ಲಿ ಹಾಕಿ ಸಲ್ಲಿಸುವುದು.

3. ಇಲಾಖೆಯಿಂದ ಕಾಮಗಾರಿಗಾಗಿ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ, ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು, ಡಾಂಬರ್, ಆರ್.ಸಿ.ಸಿ. ಪೈಪುಗಳು ಇತ್ಯಾದಿ ಸಾಮಗ್ರಿಗಳನ್ನು ಐ.ಆರ್.ಸಿ. ಮತ್ತು ಐ.ಎಸ್.ಐ. ನಿರ್ದಿಷ್ಟಪಡಿಸಿದ ಕ್ರಮವಾಗಿ ವಿವರಣೆ ಮತ್ತು ಉದ್ದೇಶಗಳಿಗನುಸಾರವಾದ, ಕಾಮಗಾರಿಗೆ ಬೇಕಾಗುವ ಎಲ್ಲಾ ಸಾಮಗ್ರಿಗಳನ್ನು ಅರ್ಜಿದಾರರು ತಮ್ಮಿಂದಲೇ ಪೂರೈಸಿಕೊಳ್ಳಬೇಕು. ಅಲ್ಲದೆ ಈ ಸಾಮಗ್ರಿಗಳ ಗುಣನಿಯಂತ್ರಣ ವರದಿಯನ್ನು ಮುಂಚಿತವಾಗಿಯೇ ಒದಗಿಸಬೇಕು.

4. ಗುತ್ತಿಗೆದಾರರು ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಒಂದು ವರ್ಷದವರೆಗೆ ಮಾಡತಕ್ಕದ್ದು.

5. ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಅರ್ಜಿಯೊಂದಿಗೆ ಮೇಲ್ಕಂಡ ತಃಖ್ತೆಯ ಕಾಲಂ-6 ರಲ್ಲಿರುವ ಟೆಂಡರ್ ಪುಸ್ತಕದ ಬೆಲೆ ಮತ್ತು ಮಾರಾಟ ತೆರಿಗೆಯನ್ನೊಳಗೊಂಡ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್, ಲೋ.ಇ. ವಿಭಾಗ, ದಾವಣಗೆರೆ ಇವರ ಹೆಸರಿಗೆ ನಗದು/ಡಿ.ಡಿ. ಮುಖಾಂತರ ಸಲ್ಲಿಸತಕ್ಕದ್ದು. ಖಾಲಿ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 05.07.04 ರಂದು ಬೆಳಿಗ್ಗೆ 10.00 ರಿಂದ ಸಂಜೆ 5.30 ರೊಳಗೆ ಖುದ್ದಾಗಿ ಪಡೆಯತಕ್ಕದ್ದು.

6. ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಕೆ.ಪಿ.ಡಬ್ಲ್ಯುಡಿ. ಕೋಡ್-ವಾಲ್ಯೂಂ-2ರ ಪಿ.ಡಬ್ಲ್ಯುಜಿ-65 ಮತ್ತು ಭಾಗ-1 ರ ಪಿ.ಡಬ್ಲ್ಯುಜಿ-66 ರಲ್ಲಿ ವಿಧಿಸಿರುವ ವಿವರವಾದ ಸೂಚನೆ ಮತ್ತು ಕರಾರುಗಳಿಗೆ ಬದ್ಧರಾಗಿರಬೇಕೆಂಬುದನ್ನು ಗಮನಿಸಬೇಕೆಂದು ವಿನಂತಿಸಲಾಗಿದೆ.

7. ಈ ಟೆಂಡರುಗಳನ್ನು ಯಾವುದೇ ಕಾರಣ ಅಥವಾ ಕಾರಣವಿಲ್ಲದೇ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಲೋಕೋಪಯೋಗಿ ಇಲಾಖೆಯ ಸಂಬಂಧಿಸಿದ ಅಧಿಕಾರಿಗಳಿಗೆ ಸೇರಿರುತ್ತದೆ.

8. ಮೇಲಿನ ಕಾಮಗಾರಿಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಮತ್ತು ಟೆಂಡರ್ ಸಲ್ಲಿಸುವ ಮತ್ತು ತೆರೆಯುವ ಬಗ್ಗೆ ಮಾಹಿತಿಯನ್ನು ಕಾರ್ಯಪಾಲಕ ಅಭಿಯಂತರು, ಲೋ.ಇ.ವಿಭಾಗ, ದಾವಣಗೆರೆ ಇವರ ಕಛೇರಿಯಿಂದ ಪಡೆಯಬಹುದಾಗಿದೆ.

9. ನಿಗದಿಪಡಿಸಿದ ದಿನಾಂಕಗಳು ಈ ಕೆಳಕಂಡಂತೆ ಇರುತ್ತವೆ.

| | | | |
|---|---|---|---|
| (ಅ) | ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | : | 01.07.2004. |
| (ಆ) | ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | : | 05.07.2004 |
| (ಇ) | ಭರ್ತಿ ಮಾಡಿದ ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್‌ಗಳನ್ನು ಕಾರ್ಯಪಾಲಕ ಅಭಿಯಂತರು, ಲೋ.ಇ. ವಿಭಾಗ, ದಾವಣಗೆರೆ ಇವರಿಗೆ ಸಲ್ಲಿಸಲು ಕೊನೆಯ ದಿನಾಂಕ | : | 08.07.2004 ಸಂಜೆ 4.00 ಗಂಟೆಯವರೆಗೆ |
| (ಈ) | ಟೆಕ್ನಿಕಲ್ ಬಿಡ್‌ನ್ನು ಕಾರ್ಯಪಾಲಕ ಅಭಿಯಂತರು, ಲೋ.ಇ. ವಿಭಾಗ, ದಾವಣಗೆರೆ ಇವರು ತೆರೆಯುವ ದಿನಾಂಕ | : | 09.07.2004 ಬೆಳಿಗ್ಗೆ 11.30 ಕ್ಕೆ. |

ತಾಂತ್ರಿಕವಾಗಿ ಮತ್ತು ಆರ್ಥಿಕವಾಗಿ ಸಬಲರಾದ ಗುತ್ತಿಗೆದಾರರ ಫೈನಾನ್ಸಿಯಲ್ ಬಿಡ್‌ನ್ನು ತೆರೆಯುವ ದಿನಾಂಕ ಮತ್ತು ವೇಳೆಯನ್ನು ಮುಂದೆ ತಿಳಿಸಲಾಗುವುದು.

**ಟಿಪ್ಪಣಿ :** (ಅ) ಮೇಲೆ ತೋರಿಸಿರುವ ಯಾವುದೇ ದಿನಾಂಕದಂದು ರಜೆ ಇದ್ದಲ್ಲಿ ಮುಂದಿನ ಕಛೇರಿ ಕೆಲಸದ ದಿನವನ್ನು ಪರಿಗಣಿಸತಕ್ಕದ್ದು.

(ಆ) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ತೆರೆಯುವ ಸಮಯದಲ್ಲಿ ಇತ್ತೀಚಿನ, ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಸಲ್ಲಿಸತಕ್ಕದ್ದು.

ಕಾರ್ಯಪಾಲಕ ಅಭಿಯಂತರರು,
ಲೋ.ಇ.ವಿಭಾಗ, ದಾವಣಗೆರೆ.

ಪಿ.ಆರ್.261

## ಅರಣ್ಯ ಇಲಾಖೆ

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ವೃತ್ತ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಎ4-ಸಿಬ್ಬಂದಿ:ವಿವ:22/2002-03 ದಿನಾಂಕ: 7ನೇ ಜೂನ್ 2004**

**ವಿಷಯ :** ಅರಣ್ಯ ವೀಕ್ಷಕರ ನೇರ ನೇಮಕಾತಿ-2004.

**ಉಲ್ಲೇಖ :** ಈ ಕಛೇರಿ ಅಧಿಸೂಚನೆ ಸಂಖ್ಯೆ: ಎ4-ಸಿಬ್ಬಂದಿ:ವಿವ:22/2002-03 ದಿನಾಂಕ: 10.02.2004

ಉಲ್ಲೇಖದಲ್ಲಿನ ಅಧಿಸೂಚನೆಯಲ್ಲಿ ಬೆಂಗಳೂರು ವೃತ್ತದ ವಿವಿಧ ವಿಭಾಗಗಳಲ್ಲಿ ಖಾಲಿ ಇರುವ 8 ಅರಣ್ಯ ವೀಕ್ಷಕ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ಅರ್ಜಿಸಲ್ಲಿಸಿದ ಅರ್ಹ ಅಭ್ಯರ್ಥಿಗಳಿಗೆ ದಿನಾಂಕ: 28.05.2004 ರಿಂದ 02.06.2004ರ ವರೆಗೆ ದೈಹಿಕ ದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯತೆ ಪರೀಕ್ಷೆಯನ್ನು ನಡೆಸಲಾಯಿತು. ದಿನಾಂಕ: 03.06.2004 ರಂದು ದೈಹಿಕ ಪರೀಕ್ಷೆಗಳಲ್ಲಿ ಅರ್ಹರಾದ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸಲಾಯಿತು. ಈ ದೈಹಿಕ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ದಿನಾಂಕ: 06.06.2004 ರಂದು ಲಿಖಿತ ಪರೀಕ್ಷೆಯನ್ನು ನಡೆಸಲಾಯಿತು. ಲಿಖಿತ ಪರೀಕ್ಷೆಯಲ್ಲಿ ಆಯಾ ಪ್ರವರ್ಗದಲ್ಲಿ ಅತೀ ಹೆಚ್ಚು ಅಂಕಗಳಿಸಿದ ಅರ್ಹತೆ ಆಧಾರದ ಮೇಲೆ ಹಾಗೂ ಕರ್ನಾಟಕ ಅರಣ್ಯ ಇಲಾಖೆ ವೃಂದ ಮತ್ತು ನೇಮಕಾತಿ ನಿಯಮಗಳು-2003 ಮತ್ತು ಪ್ರಚಲಿತ ಮೀಸಲಾತಿ ನಿಯಮಾನುಸಾರ ಅರಣ್ಯ ವೀಕ್ಷಕರ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿಯನ್ನು ಈ ಅಧಿಸೂಚನೆಯೊಂದಿಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ನಮೂದಿಸಿದೆ.

ಸದರಿ ಆಯ್ಕೆಯಾದ ಅಭ್ಯರ್ಥಿಗಳು ತಾವು ಆಯ್ಕೆಯಾದ ಪ್ರವರ್ಗಕ್ಕೆ ಸಂಬಂಧಿಸಿದಂತೆ ಮೂಲ ದಾಖಲಾತಿಗಳು ಹಾಗೂ 7ನೇ ತರಗತಿಯ ಅಂಕಪಟ್ಟಿ ಹಾಗೂ ಇತರೆ ಮೂಲ ದಾಖಲಾತಿಗಳನ್ನು ಸಲ್ಲಿಸುವ ನಿಬಂಧನೆಯ ಮೇರೆಗೆ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ಅವರಿಗೆ ಹಂಚಿಕೆ ಮಾಡಲಾದ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ನೀಡುವರು.

ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು.

## ಅನುಬಂಧ-1

### ಅರಣ್ಯ ವೀಕ್ಷಕ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿ

| ಕ್ರ. ಸಂ. | ನೋಂದಣಿ ಸಂಖ್ಯೆ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಗಳ ಪ್ರವರ್ಗ | ಜನ್ಮ ದಿನಾಂಕ | ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳು | ಆಯ್ಕೆಯಾದ ವರ್ಗ | ಹಂಚಿಕೆ ಮಾಡಲಾದ ವಿಭಾಗ ಹೆಸರು. |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | 02322 | ದುಂಡಪ್ಪ ಎ ಮುಜಗೊಂಡು | ಪ್ರವರ್ಗ-3ಬಿ | 2.4.1980 | 86 | ಸಾಮಾನ್ಯ ವರ್ಗ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ನಗರ ವಿಭಾಗ. |
| 2. | 02244 | ಕೆ. ವಿ. ಲೋಕೇಶ್ | ಪ್ರವರ್ಗ-2ಎ | 17.3.1975 | 76 | ಸಾಮಾನ್ಯ ವರ್ಗ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ಗ್ರಾಮಾಂತರ ವಿಭಾಗ. |
| 3. | 00963 | ಕೆ. ಅಶೋಕ್‌ಕುಮಾರ್ | ಪ್ರವರ್ಗ-3ಎ | 30.07.1984 | 74 | ಸಾಮಾನ್ಯ ವರ್ಗ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೋಲಾರ ವಿಭಾಗ. |
| 4. | 04084 | ಬಿ. ವಿ. ಶ್ರೀನಿವಾಸ್ | ಪ್ರವರ್ಗ-2ಬಿ | 1.01.1986 | 68 | ಪ್ರವರ್ಗ-2ಬಿ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ. |
| 5. | 03683 | ಎಂ. ವಿ. ನಾಗರಾಜ್ | ಪರಿಶಿಷ್ಟ ಜಾತಿ | 22.8.1975 | 64 | ಪರಿಶಿಷ್ಟ ಜಾತಿ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ. |
| 6. | 02290 | ಎಸ್. ಉಮೇಶ್‌ಕುಮಾರ್ | ಪರಿಶಿಷ್ಟ ಜಾತಿ | 01.06.1979 | 64 | ಪರಿಶಿಷ್ಟ ಜಾತಿ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೋಲಾರ ವಿಭಾಗ. |
| 7. | 04716 | ಅಣ್ಣೇಶ್ ಆದೃಶಪ್ಪ ಕಂಬಾರ | ಪ್ರವರ್ಗ-2ಎ | 15.6.1977 | 60 | ಪ್ರವರ್ಗ-2ಎ (ಗ್ರಾಮೀಣ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ. |
| 8. | 02172 | ಎಂ.ನಾಗರಾಜು | ಪರಿಶಿಷ್ಟ ಪಂಗಡ | 16.02.1983 | 60 | ಪರಿಶಿಷ್ಟ ಪಂಗಡ (ಸಾಮಾನ್ಯ ಅರ್ಹತೆ) | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ. |

ಪಿ.ಆರ್.268

ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು.

## ಲೋಕೋಪಯೋಗಿ ಇಲಾಖೆ,
## ಕಾರ್ಯಪಾಲಕ ಅಭಿಯಂತರವರ ಕಾರ್ಯಾಲಯ, ಲೋ.ಇ.ವಿಭಾಗ, ದಾವಣಗೆರೆ
## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಪ್ರಕಟಣೆ ಸಂ:ಕಾಅ:ದಾವಿದಾ:ತಾಂಶಾ:ನಬಾರ್ಡ್:-ಆರ್ಐಡಿಎಫ್-9/336/2004-05/ ದಿನಾಂಕ: 3ನೇ ಜೂನ್ 04**

ಈ ಕೆಳಕಂಡ 5054ನಬಾರ್ಡ್ ಕಾಮಗಾರಿಗಳಿಗೆ, ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿದ ಗುತ್ತಿಗೆದಾರರಿಂದ ಕಾಮಗಾರಿಯ ಹೆಸರನ್ನು ನಮೂದಿಸಿದ ನಿಗದಿತ ನಮೂನೆಯಲ್ಲಿ ಮೊಹರಾದ ಐಟಂವಾರು ಟೆಂಡರುಗಳನ್ನು ಈ ಕೆಳಗಡೆ ಸಹಿ ಮಾಡಿರುವವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅಂದೇ ಟೆಂಡರನ್ನು ತೆರೆಯಲಾಗುವುದು. ಸದರಿ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಗುತ್ತಿಗೆದಾರರು ಟೆಂಡರ್‌ನೊಂದಿಗೆ ಈ ಕೆಳಕಂಡ ಅಂಶಗಳಿಗೆ ತೃಪ್ತಿಕರವಾದ ಆಧಾರಗಳೊಂದಿಗೆ ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು. ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೆ ಇರುವ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

**ಷರತ್ತುಗಳು:**

1. ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಒಂದು ಆರ್ಥಿಕ ವರ್ಷದಲ್ಲಿ ಕೆಳಕಂಡ ಕಾಮಗಾರಿಯ ಮೊತ್ತದ ಶೇ.30ಕ್ಕೆ ಕಡಿಮೆ ಇಲ್ಲದಂತೆ ಅದೇ ತರಹದ ಒಂದು ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು.
2. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೇ ಮಧ್ಯದಲ್ಲಿ ತೊರೆದಿರಬಾರದು.
3. ಅ) ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು. ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ದಾಖಲಾತಿಗಳನ್ನು ಅಂದರೆ ಸೀಲ್ ಡೀಡ್/ನೋಂದಣಿ ಪ್ರಮಾಣ ಪತ್ರ/ ಡೆಲಿವರಿ ಇನ್‌ವಾಯ್ಸ್ ಇತ್ಯಾದಿಗಳನ್ನು ಟೆಂಡರ್ ಷೆಡ್ಯೂಲ್‌ಗೆ ತಪ್ಪದೇ ಲಗತ್ತಿಸತಕ್ಕದ್ದು.

   1) ಟಿಪ್ಪರ್‌ಗಳು : 2 ಸಂಖ್ಯೆ
   2) ಸ್ಟ್ಯಾಟಿಕ್ ರೋಡ್ ರೋಲರ್ (8:10 ಟನ್ ಸಾಮರ್ಥ್ಯದ್ದು) : 2 ಸಂಖ್ಯೆ
   3) ರಸ್ತೆ ಕಾಮಗಾರಿಗೆ ಅವಶ್ಯಕವಾದ ಇತರೆ ಯಂತ್ರೋಪಕರಣಗಳನ್ನು ಹೊಂದಿರುವ ಬಗ್ಗೆ ವಿವರ ಸಲ್ಲಿಸತಕ್ಕದ್ದು.

   ಆ) ಗುತ್ತಿಗೆದಾರರು ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಅಥವಾ ಬಾಡಿಗೆ ಆಧಾರದಲ್ಲಿ ತರುವವರು ಮಾಲೀಕರಿಂದ 1972ರ ಹೈರ್ ಪರ್ಚೇಸ್ ಆ್ಯಕ್ಟ್‌ನಂತೆ ಸೂಕ್ತ ಬಾಡಿಗೆ ಕರಾರು ಪತ್ರವನ್ನು ಮೇಲೆ 3(ಅ) ತಿಳಿಸಿರುವ ಎಲ್ಲಾ ಅವಶ್ಯಕ ದಾಖಲಾತಿಗಳೊಂದಿಗೆ ಹಾಗೂ ಮಾಲೀಕರು ಸದರಿ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಬಗ್ಗೆ ಅಗತ್ಯ ದಾಖಲಾತಿಗಳನ್ನು ಹಾಗೂ ಯಾವುದೇ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಖರೀದಿಸಿದ್ದು, ಆ ಸಂಸ್ಥೆಗೆ ಸದರಿ ಯಂತ್ರೋಪಕರಣಗಳನ್ನು ಅಡ ಇಟ್ಟಿದ್ದಲ್ಲಿ ಆ ಸಂಸ್ಥೆಯಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದು ಈ ಎಲ್ಲಾ ದಾಖಲಾತಿಗಳನ್ನು ಟೆಂಡರ್ ಷೆಡ್ಯೂಲ್‌ನೊಂದಿಗೆ ತಪ್ಪದೆ ಸಲ್ಲಿಸತಕ್ಕದ್ದು. ಹಾಟ್‌ಮಿಕ್ಸ್ ಪ್ಲಾಂಟ್ ಸ್ಥಾಪಿಸಿರುವ ಸ್ಥಾವರದ ಸ್ಥಳವನ್ನು ತಪ್ಪದೇ ಟೆಂಡರ್ ಷೆಡ್ಯೂಲ್‌ನೊಂದಿಗೆ ನಮೂದಿಸತಕ್ಕದ್ದು.

   1) 40:60 ಟಿ.ಪಿ.ಹೆಚ್ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ : 1 ಸಂಖ್ಯೆ
   2) ಮೆಕ್ಯಾನಿಕಲ್ ಪೇವರ್ ಫಿನಿಷರ್ : 1 ಸಂಖ್ಯೆ
   3) ಕಾಮಗಾರಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಮತ್ತು ಡಾಂಬರನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಖಾತ್ರಿ ಬಗ್ಗೆ ಪ್ರಮಾಣ ಪತ್ರ ಕಡ್ಡಾಯವಾಗಿ ತರಬೇಕಾಗುತ್ತದೆ.
   4) ಸಂಬಂಧಿಸಿದ ಗುತ್ತಿಗೆದಾರ ತಾವು ನಿರ್ವಹಿಸಿದ ಕಾಮಗಾರಿಯನ್ನು ಒಂದು ವರ್ಷದವರೆಗೂ ಸುಸ್ಥಿತಿಯಲ್ಲಿ ಕಾಯ್ದುಕೊಳ್ಳತಕ್ಕ ಜವಾಬ್ದಾರಿ ಅವರ ಮೇಲಿರುತ್ತದೆ.
   5) ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿದೆ.
   6) ಮುಂಗಡ ಠೇವಣಿ ಹಣವನ್ನು ಕಾರ್ಯಪಾಲಕ ಇಂಜಿನಿಯರ್, ಲೋ.ಇ ವಿಭಾಗ, ದಾವಣಗೆರೆ ಇವರ ಹೆಸರಿಗೆ ಅನುಸೂಚಿತ ಬ್ಯಾಂಕ್‌ಗಳ ಡಿ.ಡಿ/ ಬ್ಯಾಂಕ್ ಗ್ಯಾರಂಟಿ/ಎಫ್.ಡಿ.ಆರ್. ಮುಖಾಂತರ ಪಡೆಯತಕ್ಕದ್ದು ಹಾಗೂ ಟೆಂಡರ್ ಸಲ್ಲಿಸುವಾಗ ಲಗತ್ತಿಸತಕ್ಕದ್ದು. ವ್ಯಾಲಿಡಿಟಿ ಅವಧಿ 90 (ತೊಂಭತ್ತು) ದಿನಗಳ ಅವಧಿಯನ್ನು ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗುತ್ತದೆ.
   7) ಟೆಂಡರ್ ದಾಖಲೆಗಾಗಿ ಅರ್ಜಿ ಜೊತೆಯಲ್ಲಿ ಗುತ್ತಿಗೆದಾರರು ಚಾಲ್ತಿ ನೋಂದಣಿ ಪತ್ರ/ ಪಾಸ್ ಬುಕ್ ಮತ್ತು ಚಾಲ್ತಿ ಸಾಲಿನ ಆದಾಯ ತೆರಿಗೆ ವಿಮೋಚನೆ ಪತ್ರದ ಪ್ರತಿಯನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.
   8) ನಿಬಂಧನೆಯುಕ್ತ ಟೆಂಡರ್ ಹಾಗೂ ಮುಂಗಡ ಠೇವಣಿ ರಹಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

9) ಖಾಲಿ ಟೆಂಡರ್ ಪುಸ್ತಕ ಖರೀದಿಸಿ ಟೆಂಡರ್ ಹಾಕದೇ ಇದ್ದಲ್ಲಿ, ಸಲ್ಲಿಸಿದರೂ ಭರ್ತಿ ಮಾಡದೇ ಇದ್ದಲ್ಲಿ, ಟೆಂಡರ್‌ನೊಂದಿಗೆ ಮುಂಗಡ ಠೇವಣಿ ಲಗತ್ತಿಸದಿದ್ದಲ್ಲಿ ಅಥವಾ ಟೆಂಡರ್ ನಿಯಮಗಳನ್ನು ಪಾಲಿಸದಿದ್ದಲ್ಲಿ ದಾಖಲು ಮಾಡಲಾಗುವುದು. ಸತತವಾಗಿ 3 (ಮೂರು) ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಅರ್ಜಿಸಲ್ಲಿಸಲು ಅರ್ಹರಿರುವುದಿಲ್ಲ.

10) ಟೆಂಡರ್ ಡಾಕ್ಯುಮೆಂಟ್‌ಗಳಲ್ಲಿ ಪಿಡಬ್ಲ್ಯೂಜಿ 66 ಮತ್ತು 65 ರಲ್ಲಿನ ಷೆಡ್ಯೂಲ್‌ಗಳಲ್ಲಿ ವಿವರಗಳನ್ನು ತಪ್ಪದೇ ನೀಡತಕ್ಕದ್ದು ಮತ್ತು ರುಜುಗಳನ್ನು ತಪ್ಪದೇ ಮಾಡತಕ್ಕದ್ದು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ.) | ಟೆಂಡರ್ ಗಿಟ್ಟ ಮೊತ್ತ (ಲಕ್ಷ ರೂ.) | ಇ.ಎಂ.ಡಿ ಮೊತ್ತ (ಲಕ್ಷ ರೂ.) | ಟೆಂಡರ್ ಫಾರಂ ಬೆಲೆ | ಅರ್ಹರಾದ ಗುತ್ತಿಗೆ ದಾರರು | ಟೆಂಡರ್ ಕಾಮಗಾರಿಯನ್ನು ಪರಿಪೂರ್ಣವಾಗಿ ಮುಗಿಸಲು ನಿಗದಿಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿ: ಸಂಜೆ 5.30 ವರೆಗೆ | ಖಾಲಿ ಟೆಂಡರ್ ಫಾರಂಕೊಡುವ ದಿನಾಂಕ ಸಂಜೆ: 4.00 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ: ಸಂಜೆ 4.00 ವರೆಗೆ | ಷರಾ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1. | ಚನ್ನಗಿರಿ ತಾ: ಸಾಗರಪೇಟೆ ಅರಳೀಪುರ ರಸ್ತೆ ಅಭಿವೃದ್ಧಿ | 40.00 | 40.00 | 40000 | 6000 + ಕೆ.ಎಸ್.ಟಿ. | ಮೊದಲನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು ಮಳೆಗಾಲ ಸೇರಿ | 3.7.04 | 7.7.04 | 12.7.04 | ಐಟಂ ವಾರು |
| 2. | ಚನ್ನಗಿರಿ ತಾ: ಚನ್ನಗಿರಿ ಶಿವನಿ ರಸ್ತೆಯಿಂದ ನೆಲ್ಲಿಹಂಕಲು, ತಾವರೇಕೆರೆ ರಸ್ತೆ ಅಭಿವೃದ್ಧಿ | 50.00 | 50.00 | 50000 | 7000 + ಕೆ.ಎಸ್.ಟಿ. | ಮೊದಲನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು ಮಳೆಗಾಲ ಸೇರಿ | 3.7.04 | 7.7.04 | 12.7.04 | ಐಟಂ ವಾರು |
| 3. | ಹರಪನಹಳ್ಳಿ ತಾ: ಉಚ್ಚಂಗಿದುರ್ಗ ದಾವಣಗೆರೆ ರಸ್ತೆ ಯಿಂದ ರಾಮಘಟ್ಟ ಸೇರುವ ರಸ್ತೆ ಮಾರ್ಗ ಚಟ್ಟನಹಳ್ಳಿ ನರೇಬೊಮ್ಮನಹಳ್ಳಿ ರಸ್ತೆ ಅಭಿವೃದ್ಧಿ | 50.00 | 50.00 | 50000 | 7000 + ಕೆ.ಎಸ್.ಟಿ. | ಮೊದಲನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು ಮಳೆಗಾಲ ಸೇರಿ | 3.7.04 | 7.7.04 | 12.7.04 | ಐಟಂ ವಾರು |
| 4. | ಹರಪನಹಳ್ಳಿ ತಾ: ಮತ್ತೀಹಳ್ಳಿ ನಾಗರಕೊಂಡ ರಸ್ತೆ ಮಾರ್ಗ ಆಲದಹಳ್ಳಿ ಎನ್.ಚೀರನಹಳ್ಳಿ ರಸ್ತೆ ಅಭಿವೃದ್ಧಿ | 50.00 | 50.00 | 50000 | 7000 + ಕೆ.ಎಸ್.ಟಿ. | ಮೊದಲನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು ಮಳೆಗಾಲ ಸೇರಿ | 3.7.04 | 7.7.04 | 12.7.04 | ಐಟಂ ವಾರು |
| 5. | ಹೊನ್ನಾಳಿ ತಾ: ನ್ಯಾಮತಿ ಬೂದಿಗೆರೆ ರಸ್ತೆಯ ಆಯ್ದ ಭಾಗಗಳಲ್ಲಿ ಅಭಿವೃದ್ಧಿ | 40.00 | 40.00 | 40000 | 6000 + ಕೆ.ಎಸ್.ಟಿ. | ಮೊದಲನೇ ದರ್ಜೆ ಮತ್ತು ಮೇಲ್ಪಟ್ಟು | 6 ತಿಂಗಳು ಮಳೆಗಾಲ ಸೇರಿ | 3.7.04 | 7.7.04 | 12.7.04 | ಐಟಂ ವಾರು |

**ಬಿ. ಕೆ. ನಿಂಗಪ್ಪ**

ಪಿ.ಆರ್.262 ಕಾರ್ಯಪಾಲಕ ಇಂಜಿನಿಯರ್, ಲೋ.ಇ.ವಿಭಾಗ, ದಾವಣಗೆರೆ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಮೂರು ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಇಬ್ಬರು ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಕುರಿತು.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನನಿ 2001 ದಿನಾಂಕ: 13.02.2001.

3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ: 08.02.2000.

4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 01.06.2002.

5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30.01.2002.

6. ಈ ಕಛೇರಿಯ ಸಮಸಂಖ್ಯೆ: ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 24.03.2003

7. ಈ ಕಛೇರಿಯ ಸಮಸಂಖ್ಯೆ: ಅಂತಿಮ ಆಯ್ಕೆಪಟ್ಟಿ ದಿನಾಂಕ: 24.11.2003

8. ಈ ಕಛೇರಿಯ ಸಮಸಂಖ್ಯೆ: ನೇಮಕಾತಿ ಆದೇಶ ದಿನಾಂಕ: 05.12.2003

9. ಈ ಕಛೇರಿಯ ಸಮಸಂಖ್ಯೆ: ರದ್ದತಿ ಆದೇಶ ದಿನಾಂಕ: 09.01.2004

10. ಈ ಕಛೇರಿಯ ಸಮಸಂಖ್ಯೆ: ರದ್ದತಿ ಆದೇಶ ದಿನಾಂಕ: 09.01.2004

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಮೂರು ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವುದಕ್ಕಾಗಿ ಉಲ್ಲೇಖ (5) ರನ್ವಯ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ.ಸಂ. | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ |
|---|---|---|
| 1. | ಸಾಮಾನ್ಯ ಅರ್ಹತೆ ಅಭ್ಯರ್ಥಿ | 1 |
| 2. | ಮಹಿಳಾ ಅಭ್ಯರ್ಥಿ | 1 |
| 3. | ಗ್ರಾಮೀಣ ಅಭ್ಯರ್ಥಿ | 1 |
| | ಒಟ್ಟು | 3 |

ಉಲ್ಲೇಖ (5)ಕ್ಕೆ ಅನುಗುಣವಾಗಿ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಂದ ಬಂದ ಎಲ್ಲಾ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಜಾತಿ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದ ಕೆಳಕಂಡ ಮೂರು ಅಭ್ಯರ್ಥಿಗಳನ್ನು ಅರ್ಹತೆಯ (Merit) ಆಧಾರದ ಮೇಲೆ ಮೇಲ್ಕಂಡ ಮೀಸಲಾತಿಗೆ ಅನುಗುಣವಾಗಿ ಅಂತಿಮವಾಗಿ ಪ್ರಥಮ ದರ್ಜೆ ಸಹಾಯಕರೆಂದು ಆಯ್ಕೆ ಮಾಡಿ ಉಲ್ಲೇಖ (7) ರನ್ವಯ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಪ್ರಕಟಿಸಿ ಸದರಿ ಅಂತಿಮ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಕಂಡು ಬಂದ ಕೆಳಕಂಡ ಮೂರು ಪರಿಶಿಷ್ಟ ಜಾತಿಯ ಅಭ್ಯರ್ಥಿಗಳನ್ನು ದಿನಾಂಕ: 05.12.2003ರ ಈ ಕಛೇರಿಯ ಸಮಸಂಖ್ಯೆ ನೇಮಕಾತಿ ಆದೇಶದಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿ ಈ ನೇಮಕಾತಿ ಆದೇಶವನ್ನು RPAD ಮೂಲಕ ಕೆಳಕಂಡವರಿಗೆ ಕಳುಹಿಸಲಾಗಿತ್ತು. ಹಾಗೂ ಇವರುಗಳಿಗೆ ನೀಡಿದ ನೇಮಕಾತಿ ಆದೇಶದಂತೆ, ಕಾವೇರಿಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇಲ್ಲಿರುವ ಕೇಂದ್ರ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗಲು ಇವರುಗಳಿಗೆ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ 15 ದಿನಗಳ ಕಾಲಾವಕಾಶ ನೀಡಲಾಗಿತ್ತು.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ಜಾತಿ | ಮೀಸಲಾತಿ |
|---|---|---|---|
| 1. | ಶ್ರೀ ಶಿವಪುತ್ರ ತಂಗಾ S/o ತಿಪ್ಪಣ್ಣ ಮು/ ಕಲ್ಲೂರ ತಾಲ್ಲೂಕು: ಹುಮ್ನಾಬಾದ್ | ಪರಿಶಿಷ್ಟ ಜಾತಿ | ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |
| 2. | ಶ್ರೀ ಶಂಕರಪ್ಪ ಡೊಳ್ಳಿನ S/o ರಾವತಪ್ಪ ಮು/ಪೋಸ್ಟ್// ಮಣ್ಣೂರ ತಾಲ್ಲೂಕು ಸಿಂಧಗಿ | ಪರಿಶಿಷ್ಟ ಜಾತಿ | ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |
| 3. | ಶ್ರೀಮತಿ ಹೆಚ್. ಟಿ. ಲಲಿತಾ W/o ಆರ್. ವಾಸುದೇವ ಹಿರಿಯೂರು ಚಿತ್ರದುರ್ಗ ಜಿಲ್ಲೆ | ಪರಿಶಿಷ್ಟ ಜಾತಿ | ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ |

ಮೇಲ್ಕಂಡ ಮೂರು ಅಭ್ಯರ್ಥಿಗಳ ಪೈಕಿ ಶ್ರೀ ಶಿವಪುತ್ರ ತಂಗಾ ಇವರು ಸಾಮಾನ್ಯ ಅರ್ಹತೆ ಮೀಸಲಾತಿ ಅಡಿಯಲ್ಲಿ ಸಾಮಾನ್ಯ ಅಭ್ಯರ್ಥಿಯಾಗಿ ನೇಮಕಾತಿ ಆದೇಶ ಮುಟ್ಟಿದ ದಿನಾಂಕದಿಂದ 15 ದಿನಗಳ ಒಳಗೆ ಕೆಲಸಕ್ಕೆ ಹಾಜರಾಗಿರುತ್ತಾರೆ.

ಆದರೆ, ಉಳಿದ ಇಬ್ಬರು ಅಭ್ಯರ್ಥಿಗಳಲ್ಲಿ ಗ್ರಾಮೀಣ ಅಭ್ಯರ್ಥಿಯಾದ ಶ್ರೀ ಶಂಕರಪ್ಪ ಡೊಳ್ಳಿನ ಮತ್ತು ಮಹಿಳಾ ಅಭ್ಯರ್ಥಿಯಾದ ಶ್ರೀಮತಿ ಹೆಚ್. ಟಿ. ಲಲಿತಾ ಇವರುಗಳು ಈ ಕಛೇರಿಯಿಂದ ಉಲ್ಲೇಖ (8) ರನ್ವಯ ದಿನಾಂಕ: 05.12.2003 ರಂದು ನೀಡಿದ ಪ್ರಥಮ ದರ್ಜೆ ಸಹಾಯಕರ ನೇಮಕಾತಿ ಆದೇಶವನ್ನು ಕ್ರಮವಾಗಿ ದಿನಾಂಕ: 19.12.2003 ಮತ್ತು 12.12.2003 ರಂದು ಸ್ವೀಕರಿಸಿದ್ದರೂ ಸಹ ಈ ಇಬ್ಬರು ಅಭ್ಯರ್ಥಿಗಳು (ಹದಿನೈದು) 15 ದಿನಗಳ ಅವಧಿಯೊಳಗೆ ಕೆಲಸಕ್ಕೆ ಹಾಜರಾಗಲಿಲ್ಲ. ಇದಲ್ಲದೇ ಕೆಲಸಕ್ಕೆ ಹಾಜರಾಗಲು ನೀಡಿದ 15

ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಇಬ್ಬರು ಅಭ್ಯರ್ಥಿಗಳು ಯಾವುದೇ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಲಿಲ್ಲವಾದ್ದರಿಂದ ಉಲ್ಲೇಖ (8) ರನ್ವಯ ನೀಡಿದ ಇವರಿಬ್ಬರ ನೇಮಕಾತಿಯನ್ನು ಕ್ರಮವಾಗಿ ಉಲ್ಲೇಖ (9) ಮತ್ತು (10) ರನ್ವಯ ದಿನಾಂಕ: 09.01.2004ರ ಆದೇಶದ ಮೂಲಕ ರದ್ದುಪಡಿಸಲಾಯಿತು. ಹಾಗೂ ಈ ರೀತಿ ಇವರುಗಳ ನೇಮಕಾತಿಯನ್ನು ರದ್ದುಪಡಿಸಿದ ಈ ವಿಷಯವನ್ನು ಮೇಲ್ಕಂಡ ಈ ಇಬ್ಬರು ಅಭ್ಯರ್ಥಿಗಳಿಗೂ ಅಂದರೆ ಶ್ರೀ ಶಂಕರಪ್ಪ ಡೊಳ್ಳಿನ ಮತ್ತು ಶ್ರೀಮತಿ ಹೆಚ್.ಟಿ. ಲಲಿತಾ ಇವರುಗಳಿಗೆ RPAD ಮೂಲಕ ತಿಳಿಸಲಾಯಿತು.

ಈ ರೀತಿ ಗ್ರಾಮೀಣ ಅಭ್ಯರ್ಥಿಯಾದ ಶ್ರೀ ಶಂಕರಪ್ಪ ಡೊಳ್ಳಿನ ಮತ್ತು ಮಹಿಳಾ ಅಭ್ಯರ್ಥಿಯಾದ ಶ್ರೀಮತಿ ಹೆಚ್.ಟಿ. ಲಲಿತಾ ಇವರುಗಳು ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಹಾಗೂ ಮೇಲ್ಕಂಡ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಇವರಿಬ್ಬರು ಹಾಜರಾಗದ ಕಾರಣ ಇವರಿಬ್ಬರ ಬದಲಿಗೆ ಅದೇ ಮೀಸಲಾತಿ ಅಡಿಯಲ್ಲಿ ಅಂದರೆ ಕ್ರಮವಾಗಿ ಒಬ್ಬ ಗ್ರಾಮೀಣ ಅಭ್ಯರ್ಥಿಯನ್ನು ಮತ್ತು ಇನ್ನೊಬ್ಬ ಮಹಿಳಾ ಅಭ್ಯರ್ಥಿಯನ್ನು ಪ್ರಥಮ ದರ್ಜೆ ಸಹಾಯಕರ ಅಂತಿಮ ಹೆಚ್ಚುವರಿ ಪಟ್ಟಿಯಿಂದ ಅದೇ ಎರಡು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡುವುದಕ್ಕಾಗಿ ಉಲ್ಲೇಖ (7) ರನ್ವಯ ದಿನಾಂಕ: 24.11.2003 ರಂದು ಪ್ರಕಟಿಸಿದ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾದ ಪರಿಶಿಷ್ಟ ಜಾತಿಯ ಕೆಳಕಂಡ ಅಭ್ಯರ್ಥಿಗಳನ್ನು ಉಲ್ಲೇಖ (1) (2) ಮತ್ತು (4) ರಲ್ಲಿನ ಬ್ಯಾಕ್‌ಲಾಗ್ ನಿಯಮಗಳ ಅಡಿಯಲ್ಲಿ (Merit) ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡುವುದು ಸೂಕ್ತವೆಂದು ಮನಗಂಡು ಈ ಅಭ್ಯರ್ಥಿಗಳ ಪೂರ್ವ ಚರಿತ್ರಾ ವರದಿಗಳು ಮತ್ತು ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಬಂದಿರುವುದರಿಂದ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ: 1-270: 2001-02 ದಿನಾಂಕ: 31ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1) ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (7) ರನ್ವಯ ಪ್ರಕಟಿಸಿದ ಅಂತಿಮ ಆಯ್ಕೆ ಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿರುವ ಕೆಳಕಂಡ ಇಬ್ಬರು ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ಉಳಿದ ಪರಿಶಿಷ್ಟ ಜಾತಿಯ ಎರಡು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅರ್ಹತೆ (Merit) ಆಧಾರದ ಮೇಲೆ ಮೀಸಲಾತಿಗೆ ಅನುಗುಣವಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3850-100-4450-125-5700-150-7050ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16.3.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ.ತಿಂ.ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಿ ಕೊಳ್ಳಲಾಗಿದೆಯೋ ಅದರ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶ್ರೀ ನಾಗರಾಜ ಟಿ. S/o ತಿರುಮಲಪ್ಪ ಹೆಚ್. ಬೀರಲಿಂಗೇಶ್ವರ ದೇವಸ್ಥಾನದ ಹತ್ತಿರ, ಕುರುಬರ ಬೀದಿ ಹೊಳಲ್ಕೆರೆ-577526 | 20.5.1970 | 31.9.26 | B.SC (Agri) 75.100 | ರಿಜಿಸ್ಟ್ರಾರ್ ಕಛೇರಿ ಕೇಂದ್ರೀಯ ಅಭಿಲೇಖಾಲಯ ನಂ.29, ರಿಸಲ್ದಾರ್ ರಸ್ತೆ ಶೇಷಾದ್ರಿಪುರಂ, ಬೆಂಗಳೂರು-560020 | ಪರಿಶಿಷ್ಟ ಜಾತಿ ಹೆಚ್ಚುವರಿ ಪಟ್ಟಿ ಗ್ರಾಮೀಣ ಅಭ್ಯರ್ಥಿ |
| 2. | ಶ್ರೀಮತಿ ವಿ. ಗೀತಾ D/o ವಿಜಯಪ್ರಕಾಶ್ C/o ಪ್ರಮೋದ ವಿ. ದೇಶಪಾಂಡೆ ಪಿಂಟೋರೋಡ್ 1/16 ಟೆಲಿಫೋನ್ ಆಫೀಸ್ ಪಕ್ಕ ಹುಬ್ಬಳ್ಳಿ-580020. | 20.6.1972 | 29.8.26 | B.A 59.311 | ಜಿಲ್ಲಾ ನೋಂದಣಿ ಕಛೇರಿ ಡಿ. ಸಿ. ಆಫೀಸ್ ಕಾಂಪೌಂಡ್, ಧಾರವಾಡ-580001. | ಪರಿಶಿಷ್ಟ ಜಾತಿ ಹೆಚ್ಚುವರಿ ಪಟ್ಟಿ ಮಹಿಳಾ ಅಭ್ಯರ್ಥಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆ: ಕಾಲೇಜಿನ ಮುಖ್ಯಸ್ಥರು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ನೇಮಕಾತಿ ಪ್ರಾಧಿಕಾರಿ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಶ್ರೀಮತಿ ವಿ. ಗೀತಾ, ಹುಬ್ಬಳ್ಳಿ ವಾಸಿ ಇವರು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ. ಎಲ್. ನಾರಾಯಣ-VS-ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232: 99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಟ್ಟಿರುತ್ತದೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
17. ಗ್ರಾಮಿಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್.267

**OFFICE OF THE EXECUTIVE ENGINEER, PWD Dn., K.P.W.D. CHITRADURGA.**
**TENDER NOTIFICATION No.EE/PWD/CTA/AE/NBD-9/03/2004-05 Dated: 26th May 2004**
**TWO COVER SYSTEM**

Sealed 'ITEM RATE' Tenders are invited in duplicate in TWO COVER SYSTEM by the undersigned as per the Karnataka Transparency in Public Procurement Ordinance 2000 and Act-2000 on behalf of the Governor of Karnataka from the Registered contractors in KPWD for the works mentioned below.

The Tender for the work will consist of two covers i.e., 1) Technical Bid and 2) Financial Bid.

1. Contractor should fill up the Technical Bid in duplicate in the prescribed form duly enclosing the required certified copies and sealed in a cover superscribed as Technical Bid with the name of work and contractor's full address.
2. Contractor should fill up the Financial Bid in duplicate in the prescribed form, filling the rates in Schedule-B and sealed in a cover superscribed as Financial Bid with the name of work and contractor's full address.

The Technical Bid and Financial Bids has to be put in one sealed cover superscribing the name of work and contractor's full address. These tenders will be received by the undersigned simultaneously in the Office of the Superintending Engineer, P.W.D. Shimoga Circle, Shimoga and Office of the Executive Engineer, P.W.D. Division, Chitradurga up to 4-00 PM on the dates noted against the work. The tenders will be opened by the undersigned at this office at 11-00 AM on its dates noted against each work or on any other convenient date in presence of tenderers or of their representatives. It may be noted that if any of the dates mentioned below happens to be General Holiday the next working day will holds good.

The Technical Bid will be opened first and details furnished by the tenderer will be verified and if found satisfactory and after approval by the competent authority the Financial Bids will be opened. Otherwise the Sealed Financial Bids will not be opened. The decision of the competent authority is final in this regard.

| Sl. No. | Name of work | Amount put to Tender Rs. in lakhs | E.M.D. in Rs. | Cost of Tender form in Rs. | Class of Contractors | Period stipulated for completion including monsoon period | Last Date For | | | Date of Opening of Technical Bids |
|---|---|---|---|---|---|---|---|---|---|---|
| | | | | | | | Receipt of application up to 5.30 PM | Issue of tender documents up to 5.30 PM | Receipt of tender up to 4.00 PM | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | Improvements to road from Ramagiri-Kanevehalli Via Talakatta-Bidara kere in Holalkere Taluk | 150.00 | 150000-00 | 15000+ Tax | Class-I | 12 (Twelve) Months | 25.6.2004 | 28.6.2004 to 30.6.2004 | 2.7.2004 | 5.7.2004 |
| 2. | Improvements to road from Hagalakere-Belagur road to Kadur Border Via Ballalasamudra, Mathur in Hosadurga Taluk | 150.00 | 150000-00 | 15000+ Tax | Class-I | 12 (Twelve) Months | 25.6.2004 | 28.6.2004 to 30.6.2004 | 2.7.2004 | 5.7.2004 |

**CONDITIONS:**

1. The Contractor has to make his own arrangements for procurement of all materials required for the work. There is no Departmental Supply of materials.
2. The Contractor should produce Contractor's Registration Book at the time of Issue of Blank tender forms, and necessary entries has to be obtained.

3. The Contractor is not eligible for submission of application for tender form if he has not put the tender after purchase of tender document continuously for three times.
4. Sub-leasing of work is prohibited.
5. The Contractor after receipt of work order has to enter in to agreement with in one week and has to Commence the work with in a week after execution of Agreement. Failing which the tender will be cancelled at his own risk and cost and E.M.D. will be forfeited.
6. The Competitive Authority of P.W.D. have right to accept or reject the tender without giving any reason.
7. The Contractor after completion of work should maintain the executed work in good condition for a period of one year at his own cost.
8. The Contractor should sign all the pages in tender form and abide with the Departmental Rules.
9. The Contractor should have experience in executing similar nature of one work mentioned below in preceding 5 years, not less than 30% of the amount put to tender for the work in any one financial year.
10. The Contractor should not have abandoned any work previously and should not have delayed in completion the work without any genuine reasons.
11. a) The Contractor must have the ownership of the following machineries and equipments required for the road work with relevant documents such as Sale deed, Registration certificates, Delivery invoice, etc., obtained from competent authority and should be enclosed along with **Technical Bid.**
    1. Tippers-4 Nos.
    2. Static road roller (8/10 Ton Capacity)-2 Nos.
    3. Mechanical Sprayer-1 No.
    4. Other Machineries required for the road work.

11.b) The contractor must have ownership or on hire basis of the following machineries. The contractor bringing the Machineries on hire basis should produce the hire contract agreement as per hire purchase act-1972 from the owner of the machineries along with proof of the ownership of the hirer with all the above said documents as mentioned Vide 11(a) above. If the machineries are Hypothecated to Financier, an under taking from the Financier to hire the machineries also to be produced. All these documents should be enclosed along with the **Technical Bid.** The place of the installation of H.M.P. should invariably mentioned along with the **Technical Bid.**
1. 20/30 T.P.H. or of Higher Capacity Hot Mix Plant-1 No.
2. Mechanical paver finisher-1 No.

**Note:-** 1. The Contractor should enclose all the above documents certified by the Notary or Gazetted officer along with the Technical Bid. The original documents of above mentioned documents should be produced at the time of opening of Tender.
2. If the space provided is insufficient in the Technical Bid additional sheets may be used to furnish the details.

PR-269

Executive Engineer,
PWD Dn., Chitradurga.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇರ ನೇಮಕಾತಿ ಜಾಹಿರಾತುಗಳು**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು-560 009.**

**ಜವಾನರ ಬ್ಯಾಕ್‌ಲಾಗ್ ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಇಎಸ್‌ಟಿ:2:235:2003-04 ದಿನಾಂಕ: 14ನೇ ಜೂನ್ 2004**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಜವಾನರ ಬ್ಯಾಕ್‌ಲಾಗ್ ಹುದ್ದೆಗಳ ನೇರ ನೇಮಕಾತಿಗಾಗಿ ದಿನಾಂಕ: 4.5.2004ರ ಇದೇ ಸಮಸಂಖ್ಯೆ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ನಿಗದಿತ ನಮೂನೆ ಭಾಗ-1 ರಲ್ಲಿ ಅರ್ಜಿಗಳನ್ನು ಕರೆಯಲಾಗಿದ್ದು, ಸದರಿ ಅಧಿಸೂಚನೆಯು ದಿನಾಂಕ: 6.5.2004ರ ಕರ್ನಾಟಕ ರಾಜ್ಯ ಪತ್ರದ ಭಾಗ-5 ರಲ್ಲಿ ಪ್ರಕಟವಾಗಿರುತ್ತದೆ.

ಈ ರೀತಿ ದಿನಾಂಕ: 6.5.2004ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ: 4.5.2004 ರ ಈ ಇಲಾಖೆಯ ಸದರಿ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕವು 19.6.2004 ಎಂದು ಇರುವುದನ್ನು 3.7.2004 ಎಂದು ತಿದ್ದಿ ಓದಿಕೊಳ್ಳತಕ್ಕದ್ದೆಂದು ಈ ಮೂಲಕ ತಿಳಿಯಪಡಿಸಿದೆ. ಹಾಗೂ ಸದರಿ ಅಧಿಸೂಚನೆಯಲ್ಲಿರುವ ಉಳಿದ ನಿಬಂಧನೆಗಳಲ್ಲಿ ಮತ್ತು ಷರತ್ತುಗಳಲ್ಲಿ ಹಾಗೂ ಸೂಚನೆಗಳಲ್ಲಿ ಇನ್ನಾವುದೇ ರೀತಿಯ ಬದಲಾವಣೆಗಳು ಇರುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸಿದೆ.

**ಸಿ. ಕೃಷ್ಣಪ್ಪ**

ಪಿ.ಆರ್.272 ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ಕೈಗಾರಿಕಾ ಉತ್ತೇಜನಾಧಿಕಾರಿಗಳ ಕಛೇರಿ ಕುಶಲಕರ್ಮಿ ತರಬೇತಿ ಸಂಸ್ಥೆ, ಚನ್ನಪಟ್ಟಣ-571501

### ಹರಾಜು ಪ್ರಕಟಣೆ

**ಸಂಖ್ಯೆ: ಚಪಣ:ಕುತಸಂ:ಅ1:ಹರಾಜು:2004-05 ದಿನಾಂಕ: 8ನೇ ಜೂನ್ 04**

ಸಾರ್ವಜನಿಕರಿಗೆ ಈ ಮೂಲಕ ಪ್ರಚಾರ ಪಡಿಸುವುದೇನೆಂದರೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಚನ್ನಪಟ್ಟಣ ಕುಶಲ ಕರ್ಮಿ ತರಬೇತಿ ಸಂಸ್ಥೆಯ ವಿವಿಧ ವಿಭಾಗದಲ್ಲಿನ ಅನುಪಯುಕ್ತ ಉಪಕರಣಗಳನ್ನು ಹೇಗಿದೆಯೋ ಹಾಗೆ, ಎಲ್ಲಿದೆಯೋ ಅಲ್ಲಿಯೇ, ದಿನಾಂಕ: 26.7.04 ರಂದು ಬೆಳಿಗ್ಗೆ 11.00 ಘಂಟೆಗೆ ಈ ಕೆಳಗೆ ಸಹಿ ಮಾಡಿರುವವರ ಸಮ್ಮುಖದಲ್ಲಿ, ಕಚೇರಿ ಆವರಣದಲ್ಲಿ ಬಹಿರಂಗವಾಗಿ ಹರಾಜು ಮಾಡಲಾಗುವುದು. ಹರಾಜು ಮಾಡುವ ಅನುಪಯುಕ್ತ ಉಪಕರಣಗಳ ಒಟ್ಟು ಮೌಲ್ಯ 10361/- ರೂ.ಗಳಾಗಿರುತ್ತದೆ.

ಪಿ.ಆರ್.271 ಕೈಗಾರಿಕಾ ಉತ್ತೇಜನಾಧಿಕಾರಿ,
ಕುಶಲಕರ್ಮಿ ತರಬೇತಿ ಸಂಸ್ಥೆ, ಚನ್ನಪಟ್ಟಣ, ಬೆಂಗಳೂರು ಜಿಲ್ಲೆ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ತುಮಕೂರು ವಿಭಾಗ, ತುಮಕೂರು

### ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ

**ಸಂಖ್ಯೆ: ಎ8:ಸೇಲ್ಸ್:ಸಿಆರ್:15/04-05 ದಿನಾಂಕ: 17ನೇ ಜೂನ್ 2004**

2004-2006 (1.7.2004 ರಿಂದ 30.6.2006) ತುಮಕೂರು ಅರಣ್ಯ ವಿಭಾಗ ವ್ಯಾಪ್ತಿಯ ವಲಯಗಳಲ್ಲಿನ (ಮೆ: ಕೆಎಫ್‌ಡಿಸಿ ಬೆಂಗಳೂರು ರವರಿಗೆ ಹಸ್ತಾಂತರಿಸಿರುವ ಅರಣ್ಯ ಪ್ರದೇಶ ಮತ್ತು ಗ್ರಾಮ ಅರಣ್ಯ ಸಮಿತಿಗಳಿಗೆ ಸೇರ್ಪಡೆಯಾಗಿರುವ ಅರಣ್ಯ ಪ್ರದೇಶ ಹೊರತುಪಡಿಸಿ) ಮರಡಿ ಬೀಜ, ಮತ್ತು ತೂಪ್ರಾಎಲೆ ಎತ್ತುವಳಿ ಗುತ್ತಿಗೆ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ವಿಭಾಗದ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ 2004-2006 (1.7.2004 ರಿಂದ 30.6.2006) ರ ಅವಧಿಗೆ ತುಮಕೂರು ಅರಣ್ಯ ವಿಭಾಗದ ವಲಯಗಳಲ್ಲಿನ ಮರಡಿಬೀಜ ಮತ್ತು ತೂಪ್ರಾಎಲೆ ಎತ್ತುವಳಿ ಗುತ್ತಿಗೆ ಹಾಗೂ ಇನ್ನು ಮುಂದೆ ರೂಢಿಸಿಕೊಳ್ಳುವ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗರವರಿಂದ ಟೆಂಡರ್-ಕಂ-ಹರಾಜು ಮೂಲಕ ಪೂರ್ಣ ಹರಾಜು ಇಸ್ತಿಹಾರಿನ ಷರತ್ತುಗಳಿಗನುಗುಣವಾಗಿ ವಿಲೇವಾರಿ ಮಾಡಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ: 30.6.2004 ರಂದು ಮಧ್ಯಾಹ್ನ 1.00 ಘಂಟೆಯವರೆಗೆ ವಿತರಿಸಲಾಗುವುದು ಹಾಗೂ ಆ ದಿನವೇ ಟೆಂಡರ್-ಕಂ-ಹರಾಜು ಮಾಡಲಾಗುವುದು. ದಿನಾಂಕ: 30.6.2004 ರಂದು ನಡೆಯುವ ಹರಾಜು ಹಾಗೂ ಟೆಂಡರ್‌ಗಳಲ್ಲಿ ಬಿಡ್‌ದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಬಿಡ್ಡುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದಲ್ಲಿ ಅಥವಾ ಯಾವುದೇ ಕಾರಣದಿಂದ ಟೆಂಡರ್-ಕಂ-ಹರಾಜು ಆಗದೇ ಇದ್ದಲ್ಲಿ ಅಥವಾ ಪೂರ್ಣವಾಗದಿದ್ದರೂ ಮರು ಹರಾಜನ್ನು ದಿನಾಂಕ: 7.7.2004 ರಂದು ಮಾಡಲಾಗುವುದು. ಆ ದಿನವೂ ಸಹ ಹರಾಜಾಗದಿದ್ದಲ್ಲಿ ದಿನಾಂಕ: 14.7.2004 ರಂದು ಮರುಹರಾಜು ನಡೆಸಲಾಗುವುದು. ಈ ಮರು ಹರಾಜಿಗೆ ಪುನಃ ಯಾವುದೇ ರೀತಿಯ ಪ್ರಕಟಣೆಯನ್ನು ನೀಡಲಾಗುವುದಿಲ್ಲ. ಹೆಚ್ಚಿನ ವಿವರಗಳಿಗೆ ಹಾಗೂ ಷರತ್ತುಗಳಿಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಪಿ.ಆರ್.274 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು.

## ಜಂಟಿ ಕೃಷಿ ನಿರ್ದೇಶಕರ ಕಛೇರಿ, ಶಿವಮೊಗ್ಗ

### 'ಟೆಂಡರ್ ಮತ್ತು ಬಹಿರಂಗ ಹರಾಜು ಪ್ರಕಟಣೆ'

**ಸಂಖ್ಯೆ: ಜಕೃನಿ:ಲೆಕ್ಕ-6:ವಾ.ವಿ:04-05 ದಿನಾಂಕ: 14ನೇ ಜೂನ್ 2004**

ಈ ಕೆಳಗೆ ನಮೂದಿಸಿರುವ ಅನುಪಯುಕ್ತ ವಾಹನವನ್ನು ದಿನಾಂಕ: 16.8.2004 ರಂದು ಬೆಳಿಗ್ಗೆ 11.00 ಘಂಟೆಗೆ ಕಛೇರಿ ಆವರಣದಲ್ಲಿ ವಾಹನ ಇರುವ ಸ್ಥಿತಿಯಲ್ಲಿ ಸಾರ್ವಜನಿಕ ಸಮಕ್ಷಮ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಖರೀದಿಸಬಹುದು.

| ಕ್ರಮ ಸಂಖ್ಯೆ | ವಾಹನ ಸಂಖ್ಯೆ ಹಾಗೂ ವಿಧ | ವಿಕ್ರಯದ ಸ್ಥಳ | ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 1) | ಸಿ.ಎ.ಜಿ.1241 ಮೆಟಡೋರ್ (ಅನುಪಯುಕ್ತ) 1988 | ಜಂಟಿ ಕೃಷಿ ನಿರ್ದೇಶಕರ ಕಛೇರಿ, ಓ.ಟಿ.ರಸ್ತೆ, ಶಿವಮೊಗ್ಗ | ದಿನಾಂಕ: 16.8.2004ರ ಬೆಳಿಗ್ಗೆ 11.00 ಘಂಟೆಗೆ. |

ಹರಾಜಿನ ಬಗ್ಗೆ ಹೆಚ್ಚಿನ ವಿವರಗಳಿಗೆ ಮತ್ತು ಷರತ್ತುಗಳಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದು.

ತಮ್ಮ ವಿಶ್ವಾಸಿ,

ಪಿ.ಆರ್.276 ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.